# ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಮತ್ತು ಕೃತಿಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧನಾ ವಿದ್ಯಾರ್ಥಿ
ಯೋಗೀಶ್ .ಆರ್



ಮಾರ್ಗದರ್ಶಕರು
ಸಿ. ವೆಂಕಟೇಶ್
ಅಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮-೦೯

# "ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಮತ್ತು ಕೃತಿಗಳು"

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧನಾ ವಿದ್ಯಾರ್ಥಿ
**ಯೋಗೀಶ್ .ಆರ್**

ಮಾರ್ಗದರ್ಶಕರು
**ಸಿ. ವೆಂಕಟೇಶ್**
ಅಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ






**ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ**
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮-೦೯

650

## ಮಾರ್ಗದರ್ಶಕರ ದೃಢೀಕರಣ ಪತ್ರ

"ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಮತ್ತು ಕೃತಿಗಳು" ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್, ಪದವಿಗಾಗಿ ಯೋಗೀಶ್ .ಆರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 30-09-2009

ಸ್ಥಳ : ವಿದ್ಯಾರಣ್ಯ

ಸಿ. ವೆಂಕಟೇಶ್
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಸಂಶೋಧಕರ ಪ್ರಮಾಣ ಪತ್ರ

"**ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನ ಮತ್ತು ಕೃತಿಗಳು**" ಎಂಬ ಸಂಪ್ರಬಂಧವನ್ನು **ಸಿ.ವೆಂಕಟೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್, ಪದವಿಗಾಗಿ ದ್ರಾವಿಡ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಲಿ, ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

Yogesh R.

ದಿನಾಂಕ : 30-09-2009

ಸ್ಥಳ : ವಿದ್ಯಾರಣ್ಯ

**ಯೋಗೀಶ್ .ಆರ್**
ಸಂಶೋಧಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

**ಪೀಠಿಕೆ**

ಪ್ರತಿಯೊಬ್ಬ ಸಾಹಿತಿಯೂ ತನ್ನ ಸಾಹಿತ್ಯದ ಮುಖಾಂತರವೇ ತನ್ನನ್ನು ಗುರುತಿಸಿಕೊಳ್ಳಲು ಬಯಸುತ್ತಾರೆ. ಆದರೆ ಇತರೆ ಹಲವಾರು ಕ್ಷೇತ್ರಗಳನ್ನು ಕಡೆಗಣಿಸಿರುತ್ತಾರೆ. ಸಾಹಿತಿಗಳು ಕೇವಲ ಬರವಣಿಗೆಯ ಮುಖಾಂತರ ಗುರುತಿಸಿಕೊಳ್ಳುವುದರ ಜೊತೆಗೆ ಸಾಮಾಜಿಕ, ಶೈಕ್ಷಣಿಕ, ಆಧ್ಯಾತ್ಮಿಕ ಹೀಗೆ ಹಲವು ಕಾರ್ಯಗಳಲ್ಲಿ ತೊಡಗಿರುವವರು ತುಂಬಾ ಕಡಿಮೆ. ಇವೆಲ್ಲವುಗಳನ್ನು ಸಾಧಿಸಿಕೊಂಡು ಬಂದಿರುವವರಲ್ಲಿ ಬೆಳಗೆರೆ ಕೃಷ್ಣಶಾಸ್ತ್ರಿಗಳೂ ಒಬ್ಬರು. ಇವರು ಎಂದೂ ಸಾಹಿತಿಗಳಾಗಿ ಗುರುತಿಸಿಕೊಳ್ಳದೆ ಅವರು ಸಾಮಾಜಿಕ ಶೈಕ್ಷಣಿಕ, ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ಸಹ ತಮ್ಮ ಛಾಪನ್ನು ಮೂಡಿಸಿದ್ದಾರೆ. ಇವರು ತಮ್ಮದೇ ರೀತಿಯಲ್ಲಿ ಪಾರಂಪರಿಕ ಸಮಾಜದಲ್ಲಿ ಬೇರೂರಿದ್ದ ಕಂದಾಚಾರಗಳನ್ನು ಬದಿಗೊತ್ತಿ, ಸುತ್ತಮುತ್ತಲಿನ ಜನರ ಸಾಮಾಜಿಕ, ಸಾಂಸ್ಕೃತಿಕ ಅನನ್ಯತೆಗಳನ್ನು ಬಳೆಸುವಲ್ಲಿ ಯಶಸ್ವಿಯಾಗಿದ್ದಾರೆ. ಇವರು ಯಾವ ಮತೀಯ ಬಾಹ್ಯಾಚರಣೆಗಳ ಕಟ್ಟಿಗೆ ಸಿಕ್ಕಿ ಹಾಕಿಕೊಳ್ಳದೆ, ಭಾರತೀಯ ಪುರಾತನದ ಶ್ರೇಷ್ಠ ಮೌಲ್ಯಗಳನ್ನು ಗೌರವಿಸುತ್ತಾ ಸಾಮಾನ್ಯ ಜನರಲ್ಲಿದ್ದ ಮೌಢ್ಯ, ಕಂದಾಚಾರ, ಮತೀಯತೆಯನ್ನು ಹೋಗಲಾಡಿಸಲು ಪ್ರಯತ್ನಪಟ್ಟರು. ಇವರು ವೇದ, ಪುರಾಣ, ಸಂಸ್ಕೃತ ಮಂತ್ರಗಳನ್ನು ಓದಿಕೊಂಡಿದ್ದರೂ ಅವುಗಳನ್ನು ಉಪಯೋಗಿಸಿಕೊಂಡು ಮುಗ್ಧ ಜನರಿಗೆ ಮೋಸ ಮಾಡಲಿಲ್ಲ. ಇವರು ಅನೇಕ ಸಂಸ್ಕೃತ ಶ್ಲೋಕಗಳನ್ನು ಕಲಿತಿದ್ದರೂ ಕೂಡ ಅವರ ನಾಲಿಗೆಯಲ್ಲಿ ಯಾವಾಗಲೂ ಗ್ರಾಮ್ಯ ಭಾಷೆ ನಲಿದಾಡುತ್ತಿದೆ.

ಒಟ್ಟಾರೆ ಹೇಳಬೇಕೆಂದರೆ ಬೆಳಗೆರೆ ಕೃಷ್ಣಶಾಸ್ತ್ರಿಯವರ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಅನನ್ಯತೆ ಅಧ್ಯಯನ ಯೋಗ್ಯವಾಗಿದೆ ಎಂದು ಹೇಳಬಹುದಾಗಿದೆ.

**ಉದ್ದೇಶ**

ಬೆಳಗೆರೆ ಕೃಷ್ಣಶಾಸ್ತ್ರಿಯವರ ಜೀವನ ಮತ್ತು ಕೃತಿಗಳ ಬಗ್ಗೆ ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ. ಕನ್ನಡ ಸಂಸ್ಕೃತಿ ತನ್ನದೇ ಆದ ಒಂದು ವಿಶಿಷ್ಟತೆ ಒಳಗೊಂಡಿದೆ. ಇಂತಹ ಒಂದು

ಸಾಮಾಜಿಕ ಸಾಂಸ್ಕೃತಿಕ ಅನನ್ಯತೆ ಬೆಳಗೆರೆ ಕೃಷ್ಣಶಾಸ್ತ್ರಿಗಳ ಜೀವನದಲ್ಲಿ ಕಂಡು ಬರುತ್ತದೆ. ಸಾರ್ಥಕವಾದ ಜೀವನವನ್ನು ಸಾಮಾಜಿಕವಾಗಿ, ಸಾಹಿತ್ಯಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗ ಯಾವ ರೀತಿ ನಿರ್ವಹಿಸಿದ್ದಾರೆ ಎಂಬುದರ ಬಗ್ಗೆ ಅಧ್ಯಯನ ಮಾಡುವುದು ಇದರ ಉದ್ದೇಶವಾಗಿದೆ. ಕೇವಲ ಸಾಹಿತಿಗಳಾಗಿ ಅಲ್ಲದೆ ಅವರು ಒಬ್ಬ ಶಿಕ್ಷಕರಾಗಿಯೂ, ಸಮಾಜಸೇವಕರಾಗಿಯೂ, ಅಧ್ಯಾತ್ಮ ಚಿಂತಕರಾಗಿಯೂ ಹೇಗೆ ಕಂಡು ಬರುತ್ತಾರೆ ಎಂಬುದನ್ನು ಕುರಿತು ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ.

### ಸ್ವರೂಪ

ಯಾವುದೇ ವಿಷಯವು ತನ್ನದೇ ಆದಂತಹ ಸ್ವರೂಪವನ್ನು ಹೊಂದಿರುತ್ತದೆ. ಈ ಒಂದು ಅಧ್ಯಯನವು ಬೆಳಗೆರೆ ಕೃಷ್ಣಶಾಸ್ತ್ರಿಯವರ ಜೀವನವನ್ನು ತಿಳಿಸುವುದಲ್ಲದೆ ಅವರು ರಚಿಸಿದಂತಹ ಕೃತಿಗಳ ಮುಖಾಂತರ ಅವರನ್ನು ಅನುಭಾವಿ ವಿದ್ವಾಂಸರಾಗಿ, ಸಮಾಜ ಸುಧಾರಣೆಯ ಚಿಂತಕರಾಗಿ ಕಾಣುವಂತಹ ಅಧ್ಯಯನವಾಗಿರುತ್ತವೆ. ಬೆಳಗೆರೆ ಕೃಷ್ಣಶಾಸ್ತ್ರಿಗಳು ಮಾಡಿದ ಸೇವೆ, ಶೈಕ್ಷಣಿಕ ಪ್ರಗತಿ, ಅಧ್ಯಾತ್ಮಿಕ ಸಾಧನೆ ಮುಂತಾದ ಸಾಮಾಜಿಕ ಸಾಂಸ್ಕೃತಿಕ ಆಯಾಮಗಳನ್ನಿಟ್ಟುಕೊಂಡು ಅಧ್ಯಯನ ಮಾಡಲಾಗುವುದು. ಇವರು ಕನ್ನಡ ಸಾಹಿತ್ಯಲೋಕಕ್ಕೆ ಯಾವ ರೀತಿ ಕಾಣಿಕೆ ನೀಡಿದ್ದಾರೆ ಎಂಬುದನ್ನು ತಿಳಿಸುವುದಾಗಿದೆ.

### ವ್ಯಾಪ್ತಿ

ಬೆಳಗೆರೆ ಕೃಷ್ಣಶಾಸ್ತ್ರಿಯವರು ಹುಟ್ಟಿನಿಂದ ಹಿಡಿದು ಇಲ್ಲಿಯವರೆಗೆ ಈ ಅಧ್ಯಯನದ ವ್ಯಾಪ್ತಿ ಇದೆ. ಪ್ರಮುಖವಾಗಿ ಇವರ ಬದುಕು ಶಿಕ್ಷಣ, ಅಧ್ಯಾತ್ಮ, ಸಾರ್ವಜನಿಕ ಸೇವೆ ಹಾಗೂ ಇವರ ಕೃತಿಗಳ ಕುರಿತು ಅಧ್ಯಯನ ಮಾಡಲಾಗುತ್ತದೆ. ಇದಕ್ಕೆ ಪೂರಕವಾಗಿ ಇವರ ಒಡನಾಡಿ ಹಾಗೂ ಅಭಿಮಾನಿಗಳ ಅಭಿಪ್ರಾಯಗಳನ್ನು ಇಲ್ಲಿ ಬಳಸಿಕೊಳ್ಳಲಾಗುವುದು. ಇವರ ಕರ್ಮ ಕ್ಷೇತ್ರದ ಸ್ಥೂಲ ಪರಿಚಯವೂ ಇದರೊಂದಿಗಿರುತ್ತದೆ.

### ಅಧ್ಯಯನ ವಿಧಾನ

ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಮಾದರಿಯ ಸಮ್ಮಿಲನ ಈ ಅಧ್ಯಯನ

# ಅಧ್ಯಾಯ - ಎರಡು

# ಬೆಳಗೆರೆ ಕೃಷ್ಣಶಾಸ್ತ್ರಿಯವರ ಜೀವನ

# ಅಧ್ಯಾಯ - ಎರಡು

# ಬೆಳಗೆರೆ ಕೃಷ್ಣಶಾಸ್ತ್ರಿಯವರ ಜೀವನ

## ೨.೧. ಮನೆತನ

ಬೆಳಗೆರೆ ಕೃಷ್ಣಶಾಸ್ತ್ರಿಯವರ ಹೆಸರಿನ ಜೊತೆಗೆ ಸೇರಿಕೊಂಡಿರುವ ಬೆಳಗೆರೆ ಈಗ ಕರ್ನಾಟಕ ರಾಜ್ಯದ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಒಂದು ಸಣ್ಣಗ್ರಾಮ. ಈ ಬೆಳಗೆರೆ ಎಂಬ ಹೆಸರು ಕೇವಲ ಒಂದು ಕುಟುಂಬಕ್ಕೆ ಮಾತ್ರ ಸೇರಿದ ಸ್ಥಳನಾಮ ಶಾಸ್ತ್ರಿಯವರ ಮನೆತನದ ಮೂಲ ಆಂಧ್ರದ ಮುಲಕ ನಾಡು ಪ್ರದೇಶ ಆದುದರಿಂದಲೇ ಇವರನ್ನು ಮುಲಕನಾಡು ಮಹನೀಯರು ಎಂದು ಗುರುತಿಸಲಾಗುತ್ತದೆ. ಸ್ವಾತಂತ್ರ್ಯ ಪೂರ್ವ ಕಾಲಘಟ್ಟದಲ್ಲಿಯೇ ಅಂದರೆ ೧೬-೧೭ನೆಯ ಶತಮಾನದಲ್ಲಿಯೇ ಮನೆತನದ ಹಿರಿಯರು ಹೊಟ್ಟೆ ಪಾಡಿಗಾಗಿ ಜೀವನ ನೆಡೆಸಲು ವಲಸೆ ಬಂದಿರಬೇಕೆಂದು ಅಂದಾಜು ಮಾಡಲಾಗಿದೆ. ಕೃಷ್ಣಶಾಸ್ತ್ರಿಗಳ ತಂದೆಯ ತಂದೆ ಅಥವಾ ತಾತ ನರಸಿಂಹಶಾಸ್ತ್ರಿಯವರು ಮಹಾ ವಿದ್ವಾಂಸರಾಗಿದ್ದರು. ಶೃಂಗೇರಿಯ ನರಸಿಂಹಸ್ವಾಮಿಗಳಿಗೆ ಕ್ಲಾಸ್‌ಮೆಂಟ್ ಆಗಿದ್ದರಂತೆ ಅವರೆಲ್ಲರೂ ಸಂಪ್ರದಾಯಸ್ಥರು. ಆದರೆ ಕೃಷ್ಣಶಾಸ್ತ್ರಿಗಳ ತಂದೆ ಚಂದ್ರಶೇಖರ ಶಾಸ್ತ್ರಿಗಳು ಮಾತ್ರ ಆಧುನಿಕ ಮನಸ್ಸಿನವರಾಗಿದ್ದರು. ಇದಕ್ಕೆ ಅವರ ಸ್ವಕೀಯ ಯೋಚನೆಗಳು ಕಾರಣ ಎನಿಸುತ್ತದೆ. ಶ್ಲೋಕಗಳನ್ನು ವ್ಯಾಖ್ಯಾನಿಸುವ ವಿಶ್ಲೇಷಿಸುವ ಕ್ರಮದಲ್ಲಿ ಸ್ವಂತಿಕೆ ಇರುತ್ತಿತ್ತು. ಚಾತುರ್ ವರ್ಣಗಳನ್ನು ಕುರಿತು[1] "ಶರೀರದಲ್ಲಿಯೇ ಚಾತುರ್ ವರ್ಣಗಳಿವೆ ತಲೆ ಬ್ರಾಹ್ಮಣವಾದರೆ ತೋಳುಗಳೇ ಕ್ಷತ್ರಿಯ, ಹೊಟ್ಟೆಯೇ ವೈಶ್ಯ, ಈ ಮೂರನ್ನು ಹೊತ್ತುಕೊಂಡಿರುವ ಪಾದಗಳೇ ಶೂದ್ರ" ಎನ್ನುವಂತಹ ಭಾವನೆಯನ್ನು ಹೊಂದಿದ್ದರು. ಚಂದ್ರಶೇಖರಶಾಸ್ತ್ರಿಗಳು ಗಾಂಧಿಯವರ ಅನುಯಾಯಿಗಳಾಗಿದ್ದರು.

ಚಂದ್ರಶೇಖರ ಶಾಸ್ತ್ರೀಯವರ ಮೂಲತಃ ಬ್ರಾಹ್ಮಣ ಜಾತಿಯವರಾದರೂ ಕೂಡ ಯಾವುದೇ ಜಾತಿ ಬೇಧ ಭಾವವನ್ನು ಎಣಿಸದೆ ಎಲ್ಲರ ಮನೆಯಲ್ಲಿ, ಮನದಲ್ಲಿ, ಸ್ನೇಹ ಸಂಬಂಧವನ್ನು ಇಟ್ಟುಕೊಂಡಿದ್ದರು. ಇವರಿಗೆ ಅತಿಯಾದ ಮರೆವು ಇದ್ದತು. ಇದರಿಂದಾಗಿಯೇ ಅವರು ಮಾಡಬೇಕಾದ ಕೆಲಸಬಿಟ್ಟು,

ಇನ್ನ್ಯಾವುದೋ ಕೆಲಸದಲ್ಲಿ ನಿರತರಾಗುತ್ತಿದ್ದರು. ಡಾ.ಮಾಸ್ತಿವೆಂಕಟೇಶ್ ಅಯ್ಯಂಗಾರ್ ಡಾ.ದ.ರಾ ಬೇದ್ರೆ ವಿ.ಸೀತಾರಾಮಯ್ಯ, ಡಿ.ವಿ.ಜಿ, ತರಾಸು, ತಸು ಶಾಮರಾಯ, ಬೀಚಿ, ಆರ್.ರಾಮಚಂದ್ರರಾವ್, ವಿ.ಶಾಂತವೀರಪ್ಪ, ನಿಸಾರ್ ಅಹಮ್ಮದ್, ಚಿದಾನಂದಮೂರ್ತಿ ಹೀಗೆ ಹಲವಾರು ಪ್ರಸಿದ್ಧ ಲೇಖಕರು ಚಂದ್ರಶೇಖರಶಾಸ್ತ್ರಿಗಳ ಬಗ್ಗೆ ಬರೆದಿರುವಂತಹ ಲೇಖನಗಳ ಒಟ್ಟಾರೆ ಕೃತಿಯಾಗಿ 'ಇದು ಎಂಥಾ ಜೀವನವಯ್ಯಾ' ಪ್ರಕಟವಾಗಿದೆ. ಚಂದ್ರಶೇಖರಶಾಸ್ತ್ರಿಗಳು ಸ್ವತಃ ಆಶುಕವಿ ಹಾಗೂ ಸಂಸ್ಕೃತ ವಿದ್ವಾಂಸರಾಗಿದ್ದರು. ಬೆಳಗೆರೆ ಮನೆತನದಲ್ಲಿ ಇವರಲ್ಲದೆ ಇವರ ಮಕ್ಕಳಾದ ಜಾನಕಮ್ಮ ಪಾರ್ವತಮ್ಮ ಇವರೂ ಸಹ ಸಾಹಿತ್ಯ ಲೋಕದಲ್ಲಿ ಹೆಸರನ್ನುಗಳಿಸಿದ್ದಾರೆ. ಜಾನಕಮ್ಮ ನವೋದಯ ಕಾಲದ ಮೊದಲ ಮಹಿಳಾ ಬರಹಗಾರ್ತಿ ಎಂಬ ಕೀರ್ತಿಗೆ ಭಾಜನರಾಗಿದ್ದಾರೆ. ಇವರ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಶ್ರೀಮತಿ ಪಾರ್ವತಮ್ಮ(ಕತೆಗಾರ್ತಿ)ರವರೂ ಸಹ ಲೇಖಕಿಯಾಗಿದ್ದು ಇವರ ಮಗನಾದ 'ಹಾಯ್ ಬೆಂಗಳೂರು' ಪತ್ರಿಕೆಯ ಪ್ರಕಾಶಕ, ಸಂಪಾದಕ ರವಿಬೆಳಗೆರೆ ಇವರೂ ಸಹ ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಛಾಪು ಮೂಡಿಸಿದ್ದಾರೆ.

ಕೃಷ್ಣಶಾಸ್ತ್ರಿಗಳ ಅಣ್ಣನಾದ ಸೀತಾರಾಮಶಾಸ್ತ್ರಿಗಳು ಹಲವಾರು ಏಕಾಂಕ ನಾಟಕಗಳನ್ನು ರಚಿಸಿದ್ದಾರೆ. ಇವರು ಕ್ಷೀರಸಾಗರ ಎಂಬ ಕಾವ್ಯನಾಮದಿಂದಲೇ ನಾಟಕಗಳನ್ನು ರಚಿಸಿ ಸಾಹಿತ್ಯ ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ.

ಇಂತಹ ಸಾಹಿತ್ಯಿಕ ಮನೆತನದಲ್ಲಿ ಜನಿಸಿದಂತಹ ಕೃಷ್ಣಶಾಸ್ತ್ರಿಗಳು ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿಯೂ ಸಾಧನೆಗೈದಿದ್ದಾರೆ. ಇವರ ಸಾಹಿತ್ಯವು ಸಾಮಾನ್ಯ ಜನರ ಪ್ರತಿನಿತ್ಯದ ಬದುಕೇ ಆಗಿರುವುದು ವಿಶೇಷ.

**೨.೨. ಬಾಲ್ಯ**

ಕೃಷ್ಣಶಾಸ್ತ್ರಿಯವರು ೨೫-೫-೧೯೧೬ ರಂದು ಜನಿಸಿದರು. ಇವರ ತಂದೆ ಚಂದ್ರಶೇಖರಶಾಸ್ತ್ರಿಗಳು ಅಷ್ಟೇನು ಓದಿಕೊಂಡವರಲ್ಲ. ಇವರು ವಶಂಪಾರಂಪರ್ಯವಾಗಿ ಬಂದಂತಹ ವೇದಗಳು, ಶ್ಲೋಕಗಳನ್ನು ವ್ಯಾಖ್ಯಾನಿಸಿ ವಿಶ್ಲೇಷಿಸುವುದನ್ನು ಕಲಿತಿದ್ದರು. ಕೃಷ್ಣಶಾಸ್ತ್ರಿಗಳು ಬಾಲ್ಯದಲ್ಲಿ ಕಳೆದು ಹೋದ ಒಂದು ಘಟನೆಯನ್ನು ಮಾತ್ರ ಎಂದೂ ಮರೆಯುವುದಿಲ್ಲ.[೨] ಶಾಸ್ತ್ರಿಗಳ ಸೋದರತ್ತೆ ಗಿರಿಯಮ್ಮಜ್ಜಿ ವಿಧವೆ, ಆಕೆಯ ಹತ್ತಿರ ಶಾಸ್ತ್ರಿಗಳು ಕೊಬ್ಬರಿ ಆಸೆಗಾಗಿ ಅಡಿಗೆ ಮನೆಯಲ್ಲಿ ಬೇಟಿಯಾಗುತ್ತಿದ್ದು, ಒಮ್ಮೆ ನಿಮ್ನ ವರ್ಗದ ಕರಿಸಿದ್ದರಾಮ ಅವರ ಎದುರಿಗೆ ಸಿಕ್ಕಿದ ಶಾಸ್ತ್ರಿಯವರನ್ನು ನೋಡಿದ ತಕ್ಷಣವೇ ಎಲ್ಲಿ ಸ್ಪರ್ಷವಾಗುತ್ತದೋ ಎಂದು ಹೆದರಿ ಗೋಡೆಗೆ ಒತ್ತರಿಸಿಕೊಂಡು ಮುಟ್ಟಿಕೊಳ್ಳದಂತೆ ಹಿಂಜರಿದು ನಿಂತ ಆ ವರ್ತನೆ ಶಾಸ್ತ್ರಿಯವರಿಗೆ ಆಶ್ಚರ್ಯ ತರಿಸಿತು. ಆಗ ಮಡಿಮೈಲಿಗೆಗಳ ಕಾಲ ಇದರ ಬಗೆಗೆ ಶಾಸ್ತ್ರಿಗಳ ಮನಸ್ಸು ಮುಗ್ಧವಾಗಿದ್ದ ಕಾಲವೂ ಹೌದು. ಈ ಸಂದರ್ಭದಲ್ಲಿ ಹೇಗೋ ಏನೋ ಆತನನ್ನು ಮುಟ್ಟಿಸಿಕೊಂಡನೆಂದು ತಿಳಿದು ಸೋದರತ್ತೆ "ಮೈಲಿಗೆ ಆಗಿದ್ದೀಯಾ" ಎಂದು ಗದರಿಸಿದಾಗ, ಹೋ

ನೀರನ್ನು ಸೇದಿ ಸೇದಿ ಶಾಸ್ತ್ರೀಯವರ ತಲೆಯ ಮೇಲೆ ಸುರಿತಾ ಇದ್ದಳು. ಆ ಸಮಯಕ್ಕೆ ಚಂದ್ರಶೇಖರ ಶಾಸ್ತ್ರಿಗಳು ಬಂದರು. ಸೋದರತ್ತೆ ಅವರನ್ನು ಕುರಿತು 'ಮೈಲಿಗೆಯಾಗಿದ್ದಾನೆ ಶುದ್ಧಿ ಮಾಡುತ್ತಿದ್ದೇನ್ಪೆ- ಎಂದಳು ಅದಕ್ಕೆ ಶಾಸ್ತ್ರಿಗಳ ತಂದೆ ಹೌದೇ! ಮೈಲಿಗೆಯಾಯಿತೆ? ಎಂದು ಹೇಳುತ್ತಾ ನೀರನ್ನು ಸೇದಿ ಸೇದಿ ಸೋದರತ್ತೆಯ ಮೈ ಮೇಲೆ ಸುರಿದರು, "ನೀನು ಮೈಲಿಗೆಯಾಗಿದ್ದೀಯಾ ನಿನ್ನ ಮನಸ್ಸು ಮೈಲಿಗೆಯಾಗಿದೆ" ನಿನ್ನನ್ನು ಶುದ್ಧಿ ಮಾಡಬೇಕೆಂದು ಮತ್ತೆ ಆಕೆಯ ತಲೆಯ ಮೇಲೆ ನೀರು ಸುರಿದರು, ಈ ಘಟನೆ ಕೃಷ್ಣಶಾಸ್ತ್ರಿಗಳ ಮೇಲೆ ಗಾಢವಾದ ಪರಿಣಾಮ ಬೀರಿತು. ಗಿರಿಯಮ್ಮಜ್ಜಿಯ ಸಂಪ್ರದಾಯ ಮನೋಭಾವ ಕಂಡು ಮರುಕವೂ ಹುಟ್ಟಿತು.

ಕೃಷ್ಣಶಾಸ್ತ್ರಿಗಳ ವ್ಯಕ್ತಿತ್ವದ ಮೇಲೆ ತಮ್ಮ ತಾಯಿ ಅನ್ನಪೂರ್ಣಮ್ಮನ ಪ್ರಭಾವ ಸಾಕಷ್ಟು ಆಗಿತ್ತು. ತಂದೆ ಪುರೋಹಿತರಾದರೂ ವೇದ ವಿದ್ಯೆಯನ್ನು ಹೊಟ್ಟೆಪಾಡಿಗೆ ಬಳಸಿಕೊಳ್ಳಬಾರದು ಎಂಬ ಮನೋಭಾವದ ವಿಶಿಷ್ಟ ವ್ಯಕ್ತಿ ಇಂಥ ಸಂದರ್ಭದಲ್ಲಿ ಇದೇ ಮನೆಯ ನಿರ್ವಹಣೆ ತನ್ನ ತಾಯಿಯದು. ಮನೆತನದ ವಿದ್ಯೆ ಆಯುರ್ವೇದದಿಂದ ಮನೆ ವೈದ್ಯ ಮಾಡಿ ಜೀವನ ನಿರ್ವಹಿಸಿದರು. ಹಳೆಯ ರೋಗಗಳಿಗೆ ತಕ್ಕ ಔಷಧಿ ಕೊಡುತ್ತಿದ್ದಳು. ರೋಗಿಗಳ ಹತ್ತಿರ ಔಷಧಿಗೆ ಬೇಕಾಗುವಷ್ಟು ಹಣ ಪಡೆಯುತ್ತಿದ್ದಳು. ವಾಸಿಯಾದವರು ತಮ್ಮ ಸ್ವಂತ ಇಚ್ಛೆಯಿಂದ ದವಸ ಧಾನ್ಯಗಳನ್ನು ತಂದು ಕೊಡುತ್ತಿದ್ದರು ಹೇಗೂ ಜೀವನ ಸಾಗುತ್ತಿತ್ತು. ಶಾಸ್ತ್ರಿಗಳ ತಂದೆಯ ಆಧ್ಯಾತ್ಮಿಕ ವ್ಯಕ್ತಿತ್ವವನ್ನು ಅನ್ನಪೂರ್ಣಮ್ಮ ಅರ್ಥಮಾಡಿಕೊಂಡಿದ್ದಳು ಆದ್ದರಿಂದ ದಾಂಪತ್ಯದಲ್ಲಿ ವಿರಸವಿರಲಿಲ್ಲ. ಇಂತಹ ಮನೆತನದಲ್ಲಿನ ಪ್ರಭಾವ ಪ್ರೇರಣೆಯು ಶಾಸ್ತ್ರೀಯವರಿಗೆ ಆಯಿತು.

**೨.೩. ಶಿಕ್ಷಣ**

ಕೃಷ್ಣಶಾಸ್ತ್ರಿಯವರ ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಾದ ಬೆಳಗೆರೆಯಲ್ಲಿಯೇ ಪ್ರಾರಂಭಿಸಿದರು.[೪] ಬೆಳಗೆರೆಯಲ್ಲಿ ಸುಮಾರು ೧೯೨೪ರಲ್ಲಿ ಮಠಶಾಲೆಗಳಿದ್ದವು. ಇಂತಹ ಶಾಲೆಯಲ್ಲಿನ ಶಿಕ್ಷಕರುಗಳಿಗೆ ಆಯಾ ಊರಿನ ಶ್ರೀಮಂತ ಮಕ್ಕಳಿಂದ ಸಂಬಳ ಅಥವಾ ಕೂಲಿಯನ್ನು ನೀಡಲಾಗುತ್ತಿತ್ತು. ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಪ್ರತಿತಿಂಗಳಿಗೆ ಎಂಟಾಣೆಯನ್ನು ವಸೂಲಿ ಮಾಡಲಾಗುತ್ತಿತ್ತು. ಇಂತಹ ಶಾಲೆಯಲ್ಲಿ ಕೃಷ್ಣಶಾಸ್ತ್ರಿಗಳು ಒಂದನೇ ತರಗತಿಯಿಂದ ಮೂರನೇ ತರಗತಿಯವರೆಗೆ ಶಿಕ್ಷಣವನ್ನು ಪಡೆದರು. ನಂತರದ ದಿನಗಳಲ್ಲಿ ಬಡತನ, ಕ್ಷಾಮ, ಬರಗಾಲದಿಂದಾಗಿ ಶಾಲೆಯನ್ನು ತೊರೆದು ಎಮ್ಮೆ ಕಾಯಲು ಹೋಗುತ್ತಿದ್ದರು. ಶಾಸ್ತ್ರಿಗಳ ಅಣ್ಣನಾದ ಸೀತಾರಾಮಶಾಸ್ತ್ರಿಗಳ ಒತ್ತಾಯದಿಂದ ಬೆಂಗಳೂರಿನ Lower Secondary ಶಾಲೆಯಲ್ಲಿ ನೇರವಾಗಿ ಏಳನೇ ತರಗತಿ ಪರೀಕ್ಷೆಗೆ ಹಾಜರಾಗಿ ಉತ್ತೀರ್ಣರಾದರು. ಎಂಟನೇ ತರಗತಿಗೆ ಮಲ್ಲೇಶ್ವರಂನ ಹೈಸ್ಕೂಲ್‌ನಲ್ಲಿ ಸೇರಿದರು. ಅಲ್ಲಿಯೇ ಹತ್ತನೇ ತರಗತಿವರೆಗೆ ಶಿಕ್ಷಣವನ್ನು ಪಡೆದರು. ಶಾಸ್ತ್ರಿಗಳು ಕೇವಲ ಹತ್ತನೇ ತರಗತಿವರೆಗೆ ಓದಿದ್ದರೂ ಸಹ ತುಂಬಾ ಚೆನ್ನಾಗಿ ಇಂಗ್ಲೀಷ್‌ನಲ್ಲಿ ಮಾತನಾಡಬಲ್ಲರು ಹಾಗೂ ಬರೆಯಬಲ್ಲರು. ಇವರಿಗೆ ಹಿಂದಿ ಹಾಗೂ ತೆಲಗು ಭಾಷೆಯು ಚೆನ್ನಾಗಿ

ಪರಿಚಯವಿದೆ. ಇವರು ಹಳಗನ್ನಡದಲ್ಲಿರುವಂತಹ ಹಲವಾರು ಪುರಾಣಗಳನ್ನು, ಶ್ಲೋಕಗಳನ್ನು ವ್ಯಾಖ್ಯಾನಿಸಿ, ವಿಶ್ಲೇಷಣೆಯನ್ನು ಮಾಡಬಲ್ಲಂತಹ ನಿಪುಣರು.

### ೨.೪. ಮದುವೆ; ಮಕ್ಕಳು (ವೈವಾಹಿಕ ಜೀವನ)

ಕೃಷ್ಣಶಾಸ್ತ್ರಿಯವರ ಮದುವೆ ಪದ್ಮಾವತಿಯವರೊಂದಿಗೆ ನೆರವೇರಿತು. ಪದ್ಮಾವತಿಯವರು ಹಿರಿಯೂರಿನ ಮೋಕ್ಷಗುಂಡಂ ಹನುಮಂತರಾಯರ ಮಗಳು ಮದುವೆಯಾದ ಕೆಲವೇ ವರ್ಷಗಳಲ್ಲಿ ಮಗು ಜನಿಸಿತು. ನಂತರದ ದಿನಗಳಲ್ಲಿ ಪದ್ಮಾವತಿಯವರು ಗರ್ಭಿಣಿಯಾಗಿ ಮತ್ತೊಂದು ಮಗುವಿಗೆ ಜನ್ಮ ನೀಡುವಂತಹ ಸಂದರ್ಭ ಒದಗಿಬಂದಿತು. ಆದರೆ ತನ್ನ ಮೊದಲ ಒಂದು ವರ್ಷದ ಮಗು ಪಿಟ್ಸ್ ಬಂದು ಸಾವನ್ನಪ್ಪಿತು. ಇದನ್ನು ಕಣ್ಣಾರೆ ಕಂಡಂತಹ ಪದ್ಮಾವತಿಯೂ ಕೂಡ ಗರ್ಭಪಾತದಿಂದಾಗಿ ಅದೇ ದಿನವೇ ಸಾವನ್ನಪ್ಪಿದಳು. ಒಟ್ಟು ಮೂರು ಜೀವಗಳು ಹೋದವು.[೫] ಒಮ್ಮೆಲೆ ಕಳೆದುಕೊಂಡ ಈ ಮೂರು ಜೀವಗಳನ್ನು ನೆನೆದು ಶಾಸ್ತ್ರಿಯವರಿಗೆ ಅಸಹನೀಯ ದುಃಖವಾಯಿತು. ಇದು ಅವರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವನ್ನೇ ಬೀರಿತು. ಆಗಿನ ಅವರ ಸ್ಥಿತಿ ಕಂಡು ಜನ ಅವರಿಗೆ 'ಹುಚ್ಚೇ ಹಿಡಿದಿದೆ' ಎಂದು ಅಂದುಕೊಂಡರು. ಇಂತಹ ಸ್ಥಿತಿಯಲ್ಲಿದ್ದ ಇವರನ್ನು ಗೋಪಿನಾಥ್‌ರವರು ರಮಣ ಮಹರ್ಷಿಗಳ ಆಶ್ರಮಕ್ಕೆ ಕರೆದೊಯ್ದರು. ಹಿಮಾಲಯದಲ್ಲಿ ಹಲವಾರು ವರ್ಷಗಳ ಕಾಲ ಕಳೆದು ಹಿಂದಿರುಗಿ ಬಂದರು. ಶಾಸ್ತ್ರಿಯವರಿಗೆ ಎರಡನೇ ಮದುವೆಯನ್ನು ಮಾಡಲು ತಮ್ಮ ಮನೆಯಲ್ಲಿ ತುಂಬಾ ಉತ್ಸುಕರಾಗಿದ್ದರು. ತನ್ನ ತಂದೆ ಹಾಗೂ ತಂಗಿ ಶ್ರೀಮತಿ ಪಾರ್ವತಮ್ಮನವರು ಎಷ್ಟೇ ಪ್ರಯತ್ನ ಮಾಡಿದರೂ ಸಹ ಎರಡನೇ ಮದುವೆಗೆ ಶಾಸ್ತ್ರಿಯವರು ಒಪ್ಪುವುದಿಲ್ಲ. ತನ್ನ ಎಲ್ಲಾ ಹಲ್ಲುಗಳನ್ನು ಡಾಕ್ಟರ್ ಬಳಿ ಕಿತ್ತಿಸಿಕೊಂಡು ಬಂದು "ಈಗ ಹೇಳು ನನಗೆ ಯಾರು ಹೆಣ್ಣನ್ನು ಕೊಡುತ್ತಾರೆ ಕೇಳು" ಎಂದು ತಂದೆಯವರಿಗೆ ಹೇಳಿದ್ದಾರೆ. ಇವರು ಕೆಲವೇ ದಿನಗಳಲ್ಲಿ ಒಂದು ಹೆಣ್ಣು ಮಗು 'ಶಾರದಮ್ಮ'ರನ್ನು ದತ್ತು ತೆಗೆದುಕೊಂಡು ಸಾಕಿದರು. ತನ್ನ ಸ್ವಂತ ಮಗಳಿಗಿಂತಲೂ ಹೆಚ್ಚಾಗಿ ಆ ಮಗುವನ್ನು ಸಾಕಿ ದೊಡ್ಡವಳಾಗಿ ಮಾಡಿದರು. ಮಗಳ ಮದುವೆಯನ್ನು ಸಹ ಮಾಡಿ ತನ್ನ ಅಳಿಯ ಶ್ರೀನಿವಾಸನನ್ನು ಮನೆ ಅಳಿಯನನ್ನಾಗಿ ತನ್ನ ಮನೆಯಲ್ಲಿಯೇ ಇಟ್ಟುಕೊಳ್ಳುವಂತಹ ವ್ಯವಸ್ಥೆಯನ್ನು ಮಾಡಿಕೊಂಡರು. ತಮ್ಮ ಜವಾಬ್ದಾರಿಯೆಲ್ಲವನ್ನು ಅಳಿಯ ಮತ್ತು ಮಗಳಿಗೆ ಬಿಟ್ಟುಕೊಟ್ಟು ಆರಾಮವಾಗಿ ಕಾಲ ಕಳೆಯಲು ಬಯಸಿದ್ದರು. ಆದರೂ ವಿಧಿ ಅವರನ್ನು ಕಾಡಿತು. ಒಂದು ದಿನ ಅಳಿಯನಿಗೆ ಹಾವು ಕಡಿಯಿತು. ಹಾವಿನ ವಿಷದಿಂದಾಗಿ ಅಳಿಯನು ಸತ್ತು ಹೋದನು. ಈ ಆಘಾತವನ್ನು ಸಹಿಸಿಕೊಂಡು ಮಗಳೊಂದಿಗೆ ತಮ್ಮ ತೋಟದ ಮನೆಯಲ್ಲಿಯೇ ಈಗ ಕಾಲಕಳೆಯುತ್ತಿದ್ದಾರೆ.

### ೨.೫. ಶಿಕ್ಷಕರಾಗಿ ವೃತ್ತಿ

ಕೃಷ್ಣಶಾಸ್ತ್ರಿಯವರ ಮನೆತನವು ಶ್ರೀಮಂತ ಮನೆತನವಲ್ಲ. ಇವರು ಜೀವನವನ್ನು ಸಾಗಿಸಲು ಅನಿವಾರ್ಯವಾಗಿ ಬೆಂಗಳೂರಿನ ಹೆಚ್.ಎ.ಎಲ್ ಫ್ಯಾಕ್ಟರಿಗೆ ಕೆಲಸಕ್ಕೆ ಸೇರಿದರು.[೬] ಶಾಸ್ತ್ರಿಯವರಿಗೆ

ಫ್ಯಾಕ್ಟರಿಯಲ್ಲಿ ಆದಂತಹ ಮಾನಸಿಕ ತೊಂದರೆ ಹಾಗೂ ಒತ್ತಡದಿಂದಾಗಿ ಕೆಲಸವನ್ನು ಬಿಟ್ಟು ಬಂದರು. ಇವರು ಕೆಲವು ದಿನಗಳ ನಂತರ ಹೆಗ್ಗೆರೆಯ New type Middle School (೧೯೫೭) ಶಾಲೆಯೊಂದರಲ್ಲಿ ಅರೆಕಾಲಿಕ ಇಂಗ್ಲೀಷ್ ಶಿಕ್ಷಕರಾಗಿ ಸೇವೆಯನ್ನು ಆರಂಭಿಸಿದರು.[೭] ಹೆಗ್ಗೆರೆಯ ಶಾಲೆಯಲ್ಲಿ ಸುಮಾರು ಎರಡೂವರೆ ವರ್ಷಗಳ ಕಾಲ ಕರ್ತವ್ಯ ನಿರ್ವಹಿಸಿದರು.[೮] ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ದೇವನೂರು (ಲಕ್ಷ್ಮೀಶ ಕವಿಯ ಜನ್ಮಸ್ಥಳ) ಎಂಬ ಗ್ರಾಮದಲ್ಲಿ ಪೂರ್ಣ ಪ್ರಮಾಣದ ಸರ್ಕಾರಿ ಶಿಕ್ಷಕರಾಗಿ ಸೇವೆಯನ್ನು ಆರಂಭಿಸಿದರು. ಶಾಸ್ತ್ರಿಗಳು ಶಿಕ್ಷಕ ವೃತ್ತಿಯನ್ನು ಕೇವಲ ವೃತ್ತಿಯನ್ನಾಗಿ ಸ್ವೀಕರಿಸದೆ ಅದನ್ನು ತನ್ನ ಬದುಕು ಅಥವಾ ಜೀವನವನ್ನಾಗಿ ಸ್ವೀಕರಿಸಿದರು. ಶಾಲೆಯ ಮಕ್ಕಳಿಗೆ ಹಾಗೂ ಶಾಲೆಯ ಅಭಿವೃದ್ಧಿ ಕಾರ್ಯಗಳಿಗೆ ತನ್ನ ಸಂಬಳದ ಹೆಚ್ಚಿನ ಭಾಗವನ್ನು ಬಳಸುತ್ತಿದ್ದರು. ಕೆಲವು ವರ್ಷಗಳ ನಂತರ ಶಾಸ್ತ್ರಿಯವರನ್ನು ದೇವನೂರಿನಿಂದ ಕಳಸಕ್ಕೆ ವರ್ಗಾವಣೆ ಮಾಡಲಾಯಿತು. ದೇವನೂರಿನಲ್ಲಿ ಮಾಡಿದಂತಹ ಉತ್ತಮ ಕರ್ತವ್ಯವನ್ನು ಮನಗಂಡಿದ್ದ ಊರಿನ ಜನರು ಅವರನ್ನು ವಾಪಾಸು ಅಲ್ಲಿಗೇ ಕರೆಯಿಸಿಕೊಂಡರು. ಶಾಸ್ತ್ರಿಯವರು ದೇವನೂರಿನಲ್ಲಿರುವಾಗಲೇ ನಾಟಕವನ್ನು ರಚಿಸುವುದರಲ್ಲಿ ತೊಡಗಿದ್ದರು. ಹಲವು ವರ್ಷಗಳ ನಂತರ ದೇವನೂರಿನಿಂದ ಮೀರಾಸಾಬಿಹಳ್ಳಿ ಗ್ರಾಮಕ್ಕೆ ವರ್ಗಾವಣೆಯಾದರು. ಮೀರಾಸಾಬಿ ಹಳ್ಳಿಯಲ್ಲಿ ಕೆಲಸ ಮಾಡುವ ಹೊಸದರಲ್ಲಿ ಶಾಲೆಯ ಕೋಣೆಯು ಬಿದ್ದು ಹೋಗುವಂತಿತ್ತು,[೯] ಇದರಿಂದಾಗಿ ಮಕ್ಕಳಿಗೆ ಹೆಚ್ಚಿನ ಅನಾಹುತ ಆಗುವ ಸಂಭವವನ್ನು ತಪ್ಪಿಸಿದರು. ಊರಿನ ಜನರಿಂದ ಮಕ್ಕಳಿಗಾಗಿ ಅಲ್ಲಿಯೇ ಒಂದು ಶಾಲೆಯನ್ನು ಕಟ್ಟಿಸಿದರು. ಹೆಗ್ಗೆರೆ, ಚಿತ್ರದುರ್ಗ ಹೀಗೆ ಹಲವಾರು ಕಡೆಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಶಾಸ್ತ್ರಿಯವರು ತಮ್ಮ ಇಡೀ ಜೀವನವನ್ನು ಮಕ್ಕಳಿಗಾಗಿ, ಶಾಲೆಗಾಗಿ ಇಂದಿಗೂ ಮುಡುಪಾಗಿಟ್ಟಿದ್ದಾರೆ.

**೨.೬. ಸಾರ್ವಜನಿಕ ಸೇವೆ**

ಬೆಳಗೆರೆ ಕೃಷ್ಣಶಾಸ್ತ್ರಿಗಳು ಶಿಕ್ಷಣ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಚಂದ್ರಶೇಖರಶಾಸ್ತ್ರಿಗಳು ಸಾಯುವ ಮುನ್ನ ತಮ್ಮ ಮಗನಾದ ಕೃಷ್ಣಶಾಸ್ತ್ರಿಯವರಿಗೆ ವಾಗ್ದಾನ ಮಾಡಿಹೋಗಿರುತ್ತಾರೆ.[೧೦] ತಂದೆಯ ಅಣತಿಯಂತೆ ಅಣ್ಣನ ಆರ್ಥಿಕ ಸಹಾಯದಿಂದ ವಿದ್ಯಾಸಂಸ್ಥೆಯನ್ನು ಸ್ಥಾಪಿಸಿ ಸುತ್ತಲಿನ ಹಳ್ಳಿಯ ಬಡಹುಡುಗರ ವಿದ್ಯಾಭ್ಯಾಸಕ್ಕೆ ನೆರವಾಗಿದ್ದಾರೆ. ಕೃಷ್ಣಶಾಸ್ತ್ರಿಗಳಿಗೆ ಮೀರಾಸಾಬಿಹಳ್ಳಿ ಶಾಲೆಯ ಶಿಕ್ಷಕರಾಗಿ ವರ್ಗವಾದ ಹೊಸದರಲ್ಲಿ ಶಾಲಾ ಕಟ್ಟಡವೊಂದು ಬಿರುಕು ಬಿಟ್ಟಿತ್ತು. ಹಾಗೂ ಕಟ್ಟಡವು ಮಕ್ಕಳ ಮೇಲೆ ಬೀಳುವ ಸಂದರ್ಭವೂ ಆಗಿತ್ತು. ಅದನ್ನು ಮನಗಂಡು ಶಾಸ್ತ್ರಿಯವರು ಮಕ್ಕಳನ್ನು ಹೊರಗೆ ಕರೆದು, ಬೇವಿನ ಮರದ ಕಟ್ಟೆಯ ಮೇಲೆ ಕುಳಿತು ಪಾಠವನ್ನು ಆರಂಭಿಸಿದರು. ಅಂದಿನಿಂದ ಅವರ ಮನಸ್ಸಿಗೆ ಮೀರಸಾಬಳ್ಳಿಯಲ್ಲಿ ಶಾಲೆಯನ್ನು ಕಟ್ಟಬೇಕು ಅದಕ್ಕೆ ಯಾವ ರೀತಿಯ ಮಾರ್ಗಸೂಚಿಯನ್ನು ಅನುಸರಿಸಬೇಕೆಂದು ಯೋಚಿಸಿದರು.[೧೧] ಊರಿನಲ್ಲಿರುವಂತಹ ಚೇರ್ಮನ್ ಹನುಮಣ್ಣನನ್ನು ಕರೆದು ಅವರಿಗೆ ಅರ್ಥವಾಗುವಂತಹ ರೀತಿಯಲ್ಲಿ ಹೇಳಿದರು. ತಾನು

ಶಾಲೆಯಲ್ಲಿ ಇದ್ದುದರಿಂದ ಮಕ್ಕಳಿಗೆ ಯಾವುದೇ ಅಪಾಯ ಆಗಲಿಲ್ಲ. ನಾನು ಇಲ್ಲದೇ ಇದ್ದಲ್ಲಿ ನನ್ನ ಭಯದಿಂದ ಮಕ್ಕಳು ಶಾಲೆಯಿಂದ ಹೊರಗೆ ಬರದೇ ಒಳಗೇ ಕುಳಿತುಕೊಳ್ಳುತ್ತಿದ್ದರು. ಇದರಿಂದ ಮಕ್ಕಳು ಅಪಾಯಕ್ಕಿಡಾಗುತ್ತಿದ್ದರು. ಇದಕ್ಕೆ ಬೇಕಾದಂತಹ ಅನುಕೂಲ ಮಾಡಿಕೊಡಿ ಎಂಬುದಾಗಿ ಚೇರ್ಮನ್ನರಿಗೆ ಹೇಳಿದರು. ಚೇರ್ಮನ್ನರು ಪ್ರತ್ಯುತ್ತರವಾಗಿ ಎಂ.ಎಲ್.ಎ ಬಂದ ಮೇಲೆ ಅವರಿಗೆ ಮನವರಿಕೆ ಮಾಡಿಕೊಡುತ್ತೇನೆ ಎಂದರು. ಶಾಸ್ತ್ರಿಗಳು ನಮ್ಮ ಊರಿನಲ್ಲಿ ಸುಮಾರು ೩೦೦ ಮನೆಗಳಿವೆ ಅವರೆಲ್ಲರೂ ತಮ್ಮ ತಮ್ಮ ಮನೆಗಳನ್ನು ತಾವೇ ಕಟ್ಟಿಕೊಂಡಿದ್ದಾರೆ, ಅದರಂತೆ ಎಲ್ಲರೂ ಸೇರಿ ತಮ್ಮ ಮಕ್ಕಳಿಗೆ ಒಂದು ಶಾಲೆಯನ್ನು ಕಟ್ಟಲು ಆಗುವುದಿಲ್ಲವೇ? ಎಂಬುದಾಗಿ ವಿವರಿಸಿದರು. ಜನರಿಗೆ ಹಣವನ್ನು ಕೇಳುವುದು ಬೇಡ, ಅವರ ಶ್ರಮ ಮಾತ್ರ ಸಾಕು ಎಂದರು. ಇದರಿಂದಾಗಿ ಚೇರ್ಮನ್ ಹನುಮಣ್ಣ ಹಾಗೂ ಪಟೇಲ್ ಬೊಮ್ಮಣ ಸುಮಾರು ೫೦ ಜನರನ್ನು ಕರೆದುಕೊಂಡು ಬಂದು ಶ್ರಮಧಾನವನ್ನು ಆರಂಭಿಸಿದರು. ಶಾಲೆಯನ್ನು ಊರಿನ ಜನರ ಶ್ರಮದಿಂದಾಗಿ ಕಟ್ಟಲಾಯಿತು. ಇದೇ ರೀತಿಯಾಗಿ ಅಲ್ಲಿಯೇ ಆಸ್ಪತ್ರೆಯನ್ನು ಕಟ್ಟಲು ಜಮೀನನ್ನು ಸಹ ಉಚಿತವಾಗಿ ಪಡೆದು ಜನರಿಂದಲೇ ಕಟ್ಟಿಸಿದರು. ಕೇವಲ ಶಾಲೆಗಳನ್ನಲ್ಲದೆ, ಆಸ್ಪತ್ರೆಯನ್ನು, ನಾಟಕ ಮಂದಿರವನ್ನು, ವಿದ್ಯಾರ್ಥಿನಿಲಯವನ್ನು, ಕೆರೆಗಳನ್ನು, ಚರಂಡಿಗಳನ್ನು, ಶಿಕ್ಷಕರಿಗೆ ವಸತಿ ನಿಲಯಗಳನ್ನು ಸಹ ಕಟ್ಟಿಸಿರುವುದು ಶ್ರಮಧಾನದ ಮೂಲಕ ಎಂಬುದು ವಿಶೇಷ.

ಶಾಸ್ತ್ರಿಯವರ ಹುಟ್ಟುಗುಣವೇ ಸಾರ್ವಜನಿಕ ಸೇವೆ. ಇದು ಅವರ ನರನಾಡಿಗಳಲ್ಲಿ ಬೆರೆತು ಹೋಗಿದೆ. ಪ್ರತಿಯೊಬ್ಬ ವ್ಯಕ್ತಿಗೂ ಸಮಾನ ಶಿಕ್ಷಣ ಸವಲತ್ತುಗಳು ದೊರೆಯಬೇಕೆಂದು ಹೋರಾಡಿದರು. ಆರ್ಥಿಕವಾಗಿ ತೊಂದರೆಯಲ್ಲಿದ್ದವರಿಗೆ ಸ್ವತಃ ಇನ್ನೊಬ್ಬರಲ್ಲಿ ಬೇಡಿ ಆ ತೊಂದರಿಯಿರುವ ವ್ಯಕ್ತಿಗೆ ಕೊಟ್ಟವರು, ಇವರು ಅನೇಕ ಬಡವಿದ್ಯಾರ್ಥಿಗಳನ್ನು ಸ್ವತಃ ಖರ್ಚಿನಲ್ಲೇ ಓದಿಸಿದ್ದಾರೆ ಮತ್ತು ಓದಿಸುತ್ತಿದ್ದಾರೆ. ಇವರಿಂದ ಶಿಕ್ಷಣ ಪಡೆದವರು ಡಾಕ್ಟರು, ಇಂಜಿನಿಯರು, ಲಾಯರುಗಳು, ಶಿಕ್ಷಕರುಗಳಾಗಿ ರಾಜ್ಯದೆಲ್ಲೆಡೆ ನೆಲೆಸಿದ್ದಾರೆ. ಹಾಗೂ ಇವರುಗಳು ಶಾಸ್ತ್ರಿಯವರ ವಿದ್ಯಾಸಂಸ್ಥೆಗೆ ಸಹಾಯವನ್ನು ಮಾಡುತ್ತಲೇ ಬಂದಿದ್ದಾರೆ.

### ೨.೭. ಆಧ್ಯಾತ್ಮಿಕ ಸಾಧನೆ

ಕೃಷ್ಣಶಾಸ್ತ್ರಿಯವರು ಹಲವು ಸತ್ಪುರುಷ ವ್ಯಕ್ತಿಗಳ ಸಂಪರ್ಕದಿಂದ ಜೀವನಾನುಭವದಿಂದ ತನ್ನದೇ ಆದ ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದುಕೊಂಡಿದ್ದಾರೆ.

ಶಾಸ್ತ್ರಿಯವರ ಹೆಂಡತಿ ಮಕ್ಕಳು ತೀರಿಕೊಂಡು ಹೋದ ಮೇಲೆ ಅವರು ಹುಚ್ಚನಂತೆ ವರ್ತಿಸುತ್ತಿದ್ದರು. ಆ ಸಂದರ್ಭದಲ್ಲಿ ಮಟ್ಟಗೆರೆಯ ಗೋಪಿನಾಥರವರು ರಮಣಮಹರ್ಷಿಗಳ 'ಮೆಸೆಜ್ ಆಫ್ ಅರುಣಗಿರಿ' ಲೇ.ಟಾಮ್‌ಬ್ರಂಟ್ ಪುಸ್ತಕವನ್ನು ಶಾಸ್ತ್ರಿಯವರಿಗೆ ನೀಡಿದರು. ಆಗಿನ ಸ್ಥಿತಿಯಲ್ಲಿ ಆ ಪುಸ್ತಕ ಅವರಿಗೆ

ಏನೂ ಪರಿಣಾಮ ಬೀರಲಿಲ್ಲ. ಇವರನ್ನು ಕಂಡಂತಹ ಪದಕಿ ಎಂಬುವರು, ರಮಣಮಹರ್ಷಿಗಳ ಆಶ್ರಮಕ್ಕೆ ಕರೆದೊಯ್ಯಲು ಸೂಚನೆ ನೀಡಿದರು. ಪದಕಿಯವರು ಪಾದಯಾತ್ರೆಯಿಂದಲೇ ದೇಶ ಸಂಚಾರ ಮಾಡುತ್ತಿದ್ದರು. ಅವರು ಶಾಸ್ತ್ರಿಯವರಿಗೆ ದಾರಿ ಖರ್ಚಿಗೆ ಹಣಕೊಟ್ಟು ಗೋಪಿನಾಥರ ಜೊತೆಗೆ ಕಳುಹಿಸಿಕೊಟ್ಟರು. ರಮಣ ಆಶ್ರಮವನ್ನು ಬೇಟಿ ಮಾಡಿದ ಘಟನೆ ಅವರ ಮೇಲೆ ಅತ್ಯಂತ ಗಾಢವಾದ ಪರಿಣಾಮವನ್ನು ಬೀರಿತ್ತು. ಮೊದಲು ಆಶ್ರಮ ಅವರಿಗೆ 'ನಿಷ್ಕ್ರಿಯ'ವಾಗಿ ಕಂಡಿತು. ವೇದಿಕೆಯಲ್ಲಿ ಮೌನವಾಗಿ ಕುಳಿತ ರಮಣರು, ವೇದಿಕೆಯ ಕೆಳಗೆ ಸುಮಾರು ೫೦೦ ಮಂದಿ ಸುಮ್ಮನೆ ಮೌನವಾಗಿ ಕುಳಿತು ಧ್ಯಾನಸ್ಥರಾಗಿದ್ದರು. 'ನಿಶ್ಶಬ್ಧ' ಉಸಿರಾಡುವುದು ಕೂಡ ಕೇಳಿಸುವಷ್ಟು ಮೌನ ಆಗ ಶಾಸ್ತ್ರಿಗಳಿಗೆ ಇಡೀ ದೃಶ್ಯ 'ಸೋಮಾರಿಗಳ ಆಟ' ಎಂದೇ ಅನಿಸಿತು. ಏಕೆಂದರೆ ಗಾಂಧಿ ಆಶ್ರಮದಲ್ಲಿದ್ದ ಇವರು ಗಾಂಧಿಯವರು ಹೇಳುತ್ತಿದ್ದ "ಯಾರೇ ಆಗಲಿ ಮೈಮುರಿದು ದುಡಿದು ತಿನ್ನಬೇಕು" ಎಂಬ ತತ್ವವನ್ನು ಮೆಚ್ಚಿಕೊಂಡಿದ್ದವರು. ಈ ಆಶ್ರಮದಲ್ಲಿ 'ಸುಮ್ಮನೆ' ಕುಳಿತ ಈ ಜನ ಸಮೂಹವನ್ನು ನೋಡಿ ಬಂದದ್ದು ವ್ಯರ್ಥವಾಯಿತು ಎಂದು ಕೊಂಡು, ಆ ಪೆಂಡಾಲಿನ ಒಂದು ಗೂಟಕ್ಕೆ ಒರಗಿ ಕುಳಿತುಕೊಂಡರು. ಸ್ವಲ್ಪ ಹೊತ್ತಾದ ಮೇಲೆ ರಮಣರು ಜನರತ್ತ ಒಮ್ಮೆ ದೃಷ್ಟಿ ಬೀರಿದರು. ಆ ದೃಷ್ಟಿಗೆ ಶಾಸ್ತ್ರಿಗಳು ಬಿದ್ದರು. ಆದರೆ ಶಾಸ್ತ್ರಿಗಳು ರಮಣರನ್ನು ದಿಟ್ಟಿಸಿ ನೋಡಲಾಗಲಿಲ್ಲ. ಅವರ ಕಣ್ಣನ್ನು ಸಂಧಿಸಲು ಸಾಧ್ಯವಾಗಲಿಲ್ಲ, ಶಾಸ್ತ್ರಿಗಳು ಅಲ್ಲಿಯೇ ತಲೆಕೆಳಗೆ ಮಾಡಿ ಕುಳಿತುಕೊಂಡು ಬಿಟ್ಟರು. ರಮಣರ ನೋಟ ಪ್ರಖರತೆಯಿಂದ ಶಾಸ್ತ್ರಿಗಳ ಕಾಲುಗಳಲ್ಲಿ ಮೊದಲು ನೆವೆಯ ಅನುಭವವಾಯಿತು. ಕ್ರಮೇಣ 'ಜುಂಜುಂ' ಆದ ಹಾಗೆ ಆಯಿತು, ಮೈಯೆಲ್ಲಾ ನಡುಕ ಉಂಟಾಯಿತು. ಸಂಜೆ ಆರರ ಆ ಸಮಯಕ್ಕೆ ನಿದ್ದೆ ಬಂದ ಹಾಗಾಯಿತು. ಪ್ರಜ್ಞೆ ತಪ್ಪಿ ಬಿದ್ದುಬಿಟ್ಟರು. ಸಂಜೆ ಏಳು ಮೂವತ್ತರ ಹೊತ್ತಿಗೆ ಗೋಪಿನಾಥರು 'ಏಳಿ ಶಾಸ್ತ್ರಿಗಳೇ' ಎಂದು ಎಚ್ಚರಿಸುವ ಧ್ವನಿ ಗೊತ್ತಾಯಿತು. ಅವರು ರಮಣರ ದೃಷ್ಟಿ ನಿಮಗೆ ಏನೋ ಮಾಡಿದೆ ಎಂದುಕೊಂಡರು. ಆ ಕ್ಷಣದಿಂದ ಶಾಸ್ತ್ರಿಯವರಿಗೆ ಅತೃಪ್ತಿ ಅಸಂತೋಷ ಮರೆಯಾಯಿತು! ಮಾಯವಾಯಿತು. ಸಂಪೂರ್ಣ ಹೊಸ ಮನುಷ್ಯರಾಗಿ ಪರಿವರ್ತನೆ ಹೊಂದಿದರು. ನಂತರ ಮತ್ತೆಂದೂ ಅವರ ಜೀವನದಲ್ಲಿ ನೋವು ದುಃಖ ಕಾಡಿಲ್ಲ. ಮನಸ್ಸು ಪ್ರಶಾಂತವಾಗಿದೆ. ತೃಪ್ತಿಯ ಅನುಭವವಾಗಿದೆ. ಶಬ್ದಗಳಲ್ಲಿ ಹೇಳಲಾಗದ ಅನುಭವವಾಗಿದೆ. ಆನಂತರದಲ್ಲಿ ಅನೇಕ ಸಲ ಶಾಸ್ತ್ರೀಯವರು ರಮಣರ ಆಶ್ರಮಕ್ಕೆ ಹೋಗಿದ್ದರು.

ಕೇವಲ ರಮಣರ ಆಶ್ರಮವಲ್ಲದೇ ಶ್ರೀಮುಕುಂದೂರು ಸ್ವಾಮಿಗಳ ಸಂಪರ್ಕವನ್ನು ಪಡೆದಿದ್ದರು. ಮುಕುಂದೂರು ಸ್ವಾಮಿಗಳಲ್ಲಿದ್ದ ಅದ್ಭುತವಾದ ಆಧ್ಯಾತ್ಮಶಕ್ತಿ ಸಾಮರ್ಥ್ಯ, ಬುದ್ಧಿವಂತಿಕೆ, ಜನಸೇವೆಯನ್ನು ಗುರುತಿಸಿ ಅವುಗಳನ್ನು ತನ್ನ ಜೀವನದುದ್ದಕ್ಕೂ ಅಳವಡಿಸಿಕೊಂಡಿದ್ದಾರೆ.[೧೩] ಶಾಸ್ತ್ರಿಯವರಿಗೆ ಸತ್ಯಕಾಮ ಹಾಗೂ ಗೋವಿಂದಾಚಾರ್ಯರ ಪರಿಚಯವೂ ಇತ್ತು. ಸತ್ಯಕಾಮರು ಹಲವಾರು ಸಿದ್ಧಿಗಳನ್ನು ಪಡೆದು ಜನರಿಗೆ ಹಲವಾರು ರೀತಿಯಲ್ಲಿ ಸೇವೆಗೈದಿದ್ದಾರೆ. ಇವರಲ್ಲಿರುವ ಶಕ್ತಿ ಸಾಮರ್ಥ್ಯವನ್ನು ಸಹ

ಶಾಸ್ತ್ರಿಯವರು ಹತ್ತಿರದಿಂದಲೇ ಕಂಡಿದ್ದಾರೆ.[೧೪] ಗಾಂಧೀಜಿ, ರಮಣರು ಹಾಗೂ ಜಿ.ಕೆ ಯವರಿಂದ ಪ್ರಭಾವಿತರಾಗಿರುವ ಆದರ್ಶ ಪುರುಷ.

ಹೀಗೆ ಬೆಳಗೆರೆ ಕೃಷ್ಣಶಾಸ್ತ್ರಿಗಳು ಹಲವು ಸತ್ಪುರುಷ, ಸಜ್ಜನ ವ್ಯಕ್ತಿಗಳ ಸಂಪರ್ಕ ಸಹವಾಸದಿಂದ ಸ್ಥಿತ ಪ್ರಜ್ಞರಾಗಿದ್ದಾರೆ.

**೨.೮. ಸಾಂಸ್ಕೃತಿಕ ಅನನ್ಯತೆ**

ಕೃಷ್ಣಶಾಸ್ತ್ರಿಯವರು ಮೂಲತಃ ಬ್ರಾಹ್ಮಣರಾದರೂ ಇವರು ಎಂದೂ ಜನಿವಾರ ಹಾಕಲಿಲ್ಲ, ವೇದಗಳನ್ನು ಪಟಿಸುವುದಿಲ್ಲ. ಶಾಸ್ತ್ರಗಳನ್ನು ಹೇಳುವುದರಲ್ಲಿ ಕಾಲವನ್ನು ಕಳೆಯಲಿಲ್ಲ. ಇವರು ಸಮಾಜದಲ್ಲಿನ ಪ್ರತಿಯೊಬ್ಬರೂ ಸಮಾಜವಾದ ಹಕ್ಕು ಭಾದ್ಯತೆಗಳನ್ನು ಹೊಂದಿರಬೇಕೆಂಬ ಹಂಬಲವನ್ನು ಹೊಂದಿದ್ದರು. ಇವರು ಹಲವಾರು ಆಸ್ಪತ್ರೆ, ರಂಗಮಂದಿರ, ಶಾಲಾಕಾಲೇಜುಗಳನ್ನು ನಿರ್ಮಾಣಮಾಡಿದ್ದಾರೆ. ಅವುಗಳಿಗೆ ಬೇಕಾಗಿರುವ ಆರ್ಥಿಕ ಸವಲತ್ತುಗಳನ್ನು ಜನರಿಂದಲೇ ಪಡೆದು ಜನರಿಗೋಸ್ಕರವೇ ಕಟ್ಟಿಸಿದ್ದಾರೆ. ಕಾಯಾವಾಚಾಮಾನಸಾ 'ಗಾಂಧಿವಾದಿ' ಈ ಸಾಮಾಜಿಕ ಕಳಕಳಿಯ ಪ್ರತೀಕಾಗಿ ಬೆಳಗೆರೆಯಲ್ಲಿ ವಿದ್ಯಾಸಂಸ್ಥೆ ಹಾಗೂ ಉಚಿತ ವಿದ್ಯಾರ್ಥಿನಿಯಗಳಿಗೆ ಕಾರಣಕರ್ತರಾಗಿದ್ದಾರೆ.[೧೫] ಭಗವದ್ಗೀತೆಯನ್ನು ಶಾಸ್ತ್ರಿಯವರು ಒಂದೇ ವಾಕ್ಯದಲ್ಲಿ ಈ ಕೆಳಗಿನಂತೆ ಹೇಳುತ್ತಾರೆ. "ಯಾವುದೇ ಕೆಲಸವನ್ನು ಸ್ವಾರ್ಥ ಅಹಂಕಾರ ಇಲ್ಲದಂತೆ ಶ್ರದ್ಧೆಯಿಂದ ನಿರ್ವಹಿಸಬೇಕು." ಈ ಮೇಲಿನ ವಾಕ್ಯದಂತೆ ಶಾಸ್ತ್ರಿಯವರೂ ಕೂಡ ನಡೆಯುತ್ತಾ ಜೀವನ ಸಾಗಿಸುತ್ತಿದ್ದಾರೆ. ಇವರಿಗೆ ಇತ್ತೀಚಿನ ದಿನಗಳಲ್ಲಿ ಇರುವಂತಹ ರಾಜಕೀಯ ಅಂದರೆ ಹಿಡಿಸುವುದಿಲ್ಲ. ಇವರು ಇದೇ ಕಾರಣದಿಂದಾಗಿಯೇ ಯಾವುದೇ ಸಮಾರಂಭಗಳಿಗೆ ಹೋಗುವುದಿಲ್ಲ, ಇವರನ್ನು ಹುಡುಕಿಕೊಂಡು ಹಲವಾರು ಪ್ರಶಸ್ತಿಗಳು ಬಂದವು ಆದರೆ ರಾಜಕೀಯ ಪ್ರೇರಿತವಲ್ಲದವುಗಳನ್ನು ಮಾತ್ರ ಸ್ವೀಕರಿಸಿದರು. ಇವರು ಹಲವಾರು ಭಾಷೆಗಳಲ್ಲಿದ್ದಂತಹ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟಿದ್ದಾರೆ. ಶಾಸ್ತ್ರಿಯವರು ಕೇವಲ ಶಿಕ್ಷಕರಲ್ಲದೇ ಒಬ್ಬ ಪ್ರತಿಭಾನ್ವಿತ ಸಾಹಿತಿಯಾಗಿ ಹೊರ ಹೊಮ್ಮಿದ್ದಾರೆ. ಆದರೆ ಎಂದೂ ತಾವು ಸಾಹಿತಿ ಎಂದು ಹೇಳಿಕೊಳ್ಳಲು ಇಷ್ಟಪಡುವುದಿಲ್ಲ ಅವರಿಗಿರುವ ಅಪಾರವಾದ ಅನುಭವವನ್ನು ಅನುಭವವಾಗಿ ತಮ್ಮ ಕೃತಿಗಳ ಮೂಲಕ ಜನರಿಗೆ ಎಚ್ಚರಿಸುವಲ್ಲಿ ಪ್ರಯತ್ನಿಸುತ್ತಿದ್ದಾರೆ.[೧೬] ಜಾನಪದ ಕಂಪ್ಯೂಟರ್ ಎಂದೇ ಪ್ರಸಿದ್ಧರಾಗಿದ್ದ ಸಿರಿಯಜ್ಜಿಯನ್ನು ಸಾಂಸ್ಕೃತಿಕ ಲೋಕಕ್ಕೆ ಪರಿಚಯಿಸಿದ್ದು ಇವರೇ.

ಬೆಂಗಳೂರಿನಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ೧೯೨೬ರಲ್ಲಿ ಗಾಂಧೀಜಿಯವರು ಮೈಸೂರು ಸಂಸ್ಥಾನದ ಅತಿಥಿಯಾಗಿ ಬಂದಾಗ ಸ್ವಯಂ ಸೇವಕರಾಗಿ ಕಾರ್ಯ ನಿರ್ವಹಣೆ ಮಾಡಿದ್ದರು. ಆಚಾರ್ಯ ವಿನೋಭಾ ಅವರ ಜೊತೆಗೆ

ಭೂದಾನ ಚಳುವಳಿಯಲ್ಲಿ ಭಾಗವಹಿಸಿದ್ದು ಶ್ರಮಾಧಾನದ ಮೂಲಕವೇ ಮೀರಾಸಾಬಿಹಳ್ಳಿಯಲ್ಲಿ ಐದು ಕೊಠಡಿಗಳ ಶಾಲಾ ಕಟ್ಟಡ ಆಸ್ಪತ್ರೆ, ಶಿಕ್ಷಕರ ವಸತಿ ಗೃಹಗಳನ್ನು ನಿರ್ಮಿಸಿದರು.

ಶ್ರಿ.ಟಿಮಿಟಿ ಕ್ರಿಸ್ಟೋಫರ್, ಕೆ.ಹಿಲ್, ಶ್ರೀ ಪೀಟರ್ ಜೆ ಕ್ಲಾಸ್, ಶ್ರೀ ಆಂಡ್ರೊಸ್ ಮತ್ತು ತೀ.ನಂ.ಶಂಕರನಾರಾಯಣ, ಆರ್.ಶೇಷಶಾಸ್ತ್ರಿ, ಕೃಷ್ಣಮೂರ್ತಿ ಹಾನೂರು, ಬಸವರಾಜ ಕಲ್ಗುಡಿ ಮುಂತಾದ ಸಂಶೋಧಕರಿಗೆ ನೆರವನ್ನು ನೀಡಿದ್ದಾರೆ. ಜಾನಪದ ಜಂಗಮ ಎಸ್.ಕೆ.ಕರೀಂಖಾನ್, ಸಿರಿಯಜ್ಜಿ ಮುಂತಾದವರನ್ನು ಬೆಳಗೆರೆ ಜನತೆ ಪರವಾಗಿ ಸನ್ಮಾಸಿದ್ದಾರೆ.

ತಿರುವಣ್ಣಾಮಲೆಯ ರಮಣಮಹರ್ಷಿ, ಆನಂದಾಶ್ರಮದ ಕೇರಳ ರಾಮದಾಸರು, ಬಾಗೂರಿನ ಶರಣಮ್ಮ, ಹೃಷಿಕೇಶದ ಶಿವಾನಂದಸ್ವಾಮಿ, ಮುಕುಂದೂರು ಸ್ವಾಮಿ, ಜಿ.ಕೆ, ಗಾಂಧೀಜಿ, ಮಲ್ಲಾಡಿಹಳ್ಳಿಯ ರಾಘವೇಂದ್ರ ಸ್ವಾಮೀಜಿ ಅವರೊಂದಿಗೆ ಹೆಚ್ಚಿನ ಒಡನಾಟವನ್ನು ಇಟ್ಟುಕೊಂಡಿದ್ದರು.

## ಅಡಿಟಿಪ್ಪಣಿ

೦೧. ಬೆಳಗೆರೆ ಕೃಷ್ಣಶಾಸ್ತ್ರಿಗಳೊಂದಿಗೆ, ಬಿ.ಪಿ.ವೀರೇಂದ್ರಕುಮಾರ್ ಸಂದರ್ಶನ ಹಳ್ಳಿಚಿತ್ರ ನಾಟಕದಲ್ಲಿ ಪ್ರಕಟ

೦೨. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೪

೦೩. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೫-೬

೦೪. ಬೆಳಗೆರೆ ಕೃಷ್ಣಶಾಸ್ತ್ರಿಗಳೊಂದಿಗೆ ಸಂದರ್ಶನದಿಂದ ಪಡೆದ ಮಾಹಿತಿ, ೧೨.೦೮.೦೯ರಂದು

೦೫. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೩೯

೦೬. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೩೮

೦೭. ಬೆಳಗೆರೆ ಕೃಷ್ಣಶಾಸ್ತ್ರಿಗಳೊಂದಿಗೆ ಸಂದರ್ಶನದಿಂದ ಪಡೆದ ಮಾಹಿತಿ, ೧೨.೦೮.೦೯ರಂದು

೦೮. ಸಂದರ್ಶನ, ೧೨.೦೮.೦೯ರಂದು

೦೯. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೨೭

೧೦. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೨೭

೧೧. ಸಂದರ್ಶನ, ೧೨.೦೮.೦೯ರಂದು

೧೨. ಬೆಳಗೆರೆ ಕೃಷ್ಣಶಾಸ್ತ್ರಿಗಳೊಂದಿಗೆ ಬಿ.ಪಿ.ವೀರೇಂದ್ರಕುಮಾರ್‌ರವರಿಂದ ಸಂದರ್ಶನ, ಹಳ್ಳಿ ಚಿತ್ರ ನಾಟಕದಲ್ಲಿ ಪ್ರಕಟ

೧೩. ಎಲೆಮರೆಯ ಅಲರು, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೬೩

೧೪. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೨೭೩

೧೫. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಪು-೪೩

೧೬. ಮರೆಯಲಾದೀತೇ, ಲೇ ಬೆಳಗೆರೆ ಕೃಷ್ಣಶಾಸ್ತ್ರಿ, ಅನುಬಂಧ-೧, ಪು-೩೮೭

## ಅಧ್ಯಾಯ - ಮೂರು

# ಬೆಳಗೆರೆ ಕೃಷ್ಣಶಾಸ್ತ್ರಿಯವರ ಕೃತಿಗಳು (ಪ್ರಕಟಿತ)

೩.೧. ತುಂಬಿ (ಕವನ ಸಂಗ್ರಹ)

೩.೨. ಯೇಗ್ದಾಗೆಲ್ಲಾ ಐತೆ

೩.೩. ಮರೆಯಲಾದೀತೇ

೩.೪. ಎಲೆಮರೆಯ ಅಲರು

೩.೫. ಸಾಹಿತಿಗಳ ಸ್ಮೃತಿ

೩.೬. ಹಳ್ಳಿ ಚಿತ್ರ (ನಾಟಕ)

೩.೭. ಹಳ್ಳಿ ಮೇಷ್ಟ್ರು (ನಾಟಕ)

## ಅಧ್ಯಾಯ - ಮೂರು

# ಬೆಳಗೆರೆ ಕೃಷ್ಣಶಾಸ್ತ್ರಿಯವರ ಕೃತಿಗಳು (ಪ್ರಕಟಿತ)

### ೩.೧. ತುಂಬಿ (ಕವನಸಂಗ್ರಹ)

ಕೃಷ್ಣಶಾಸ್ತ್ರಿಯವರ 'ತುಂಬಿ', ಇವರ ಏಕೈಕ ಕವನ ಸಂಗ್ರಹವಾಗಿದೆ. 'ತುಂಬಿ' ಅವರ ಬದುಕಿನನುಭವದ ಮೂಸೆಯಿಂದ ಪರಿಪಕ್ವವಾಗಿ ಹೊರ ಬಂದ ಸಂಕಲನವಾಗಿದೆ. ತುಂಬಿ ಒಂದು ಚಿಕ್ಕ ಕೀಟ, ಮಧುವನ್ನು ಹೀರಿ, ಮಧುವನ್ನೇ ನೀಡುವ ಈ ತುಂಬಿ ಜೀವನೋತ್ಸಾಹಕ್ಕೆ ಸಂಕೇತವಾಗಿದೆ ಎಲ್ಲೆಲ್ಲಿಂದಲೋ ಹಲವು ಹೂಗಳ ಮಕರಂದವನ್ನು ತಂದು ಸೇರಿಸಿ, ಒಂದೇ ಗೂಡಿನಲ್ಲಿ ಹಲವು ಸಿಹಿಯನ್ನು ಸೇರಿಸಿ, ಹೊಸ ರುಚಿಯನ್ನು ಸೃಷ್ಟಿಸಿರುವ ಈ ತುಂಬಿ ಹಲವು ಭಾವಗಳ ಮಿಲನವಿದೆ. ಸರ್ವಶಕ್ತಿಯಾಗಿ ಭಗವಂತ, ಜೀವನದ ಕುರಿತಾದ ಕವನಗಳು, ಹುಟ್ಟು ಸಾವುಗಳ ಮರ್ಮ, ಸಾಧಕನಿಗೆ ಮಾರ್ಗದರ್ಶನ, ಆಧ್ಯಾತ್ಮದತ್ತ ನೋಟ ಹಾಗೂ ಸಾಮಾಜಿಕ ಸ್ವಾಸ್ಥ್ಯದ ಕಳಕಳಿ ಹೀಗೆ ಹಲವು ಭಾವಗಳ ಮಿಲನವೇ 'ತುಂಬಿ'ಯಾಗಿ ಹೊರಬಂದಿದೆ.

ಈ ಸಂಕಲನದ ಮೊದಲನೇ ಕವನ 'ತುಂಬಿ' ಭಾವದಿಂದ ಹೊರಟು ಅನುಭಾವದತ್ತ ಸಾಗಿದೆ. ಇಲ್ಲಿ ತುಂಬಿ ಮನಸ್ಸಿನ ಪ್ರತಿಮೆಯಾಗಿ ಬಂದಿದೆ.

ತುಂಬಿಗಾನವ ಪಾಡಿತು[೧] ಎಂದು ಆರಂಭವಾಗುವ ಕವನ ಮನಸ್ಸಿನಾಳಕ್ಕೆ ಹೊಕ್ಕು, ಮನದಾಳದ ತುಂಬ ಮಧುರಸದಿಂದ ಉಬ್ಬಿ, ಮಧುರ ಭಾವದ ಹಬ್ಬಿ, ಮುದದಿಂದ ಕೊಬ್ಬಿ, ಮುದವೇರಿ ಉದಯರಾಗವನ್ನು ಹಾಡುವಂತಾಗಿದೆ. ಕ್ರಮೇಣ 'ತುಂಬಿ' ಮನಸ್ಸಿನ ಪ್ರತಿಮೆಯಿಂದ ಜೀವನ ಪ್ರತಿಮೆಯಾಗಿ ಬೆಳೆಯುತ್ತದೆ. ಹಾಗಾಗಿಯೇ "ತುಂಬಿ ಬಂದಿತು ಭಾವ ತುಂಬಿತು ಲೋಕವ ಚುಂಬಿಸಿ ಜೀವನ ತುಂಬದೆ ಗಾನವ ಹಾಡಿತು"[೨] ಎಂದು ಹೇಳುತ್ತಾರೆ. "ಮನಸಿಗೆ ಕಾಣದ ಮಾತಿಗೆ ಮೀರಿದ ತಾನೇ ತನ್ಮಯವಾದ ಚಿನ್ಮಯ ನೀನೆಂದಿದೆ" ಎಂಬುದಾಗಿ ಭಾವದಿಂದ ಕವನ ಅನುಭವದತ್ತ ಸಾಗುತ್ತದೆ. ಶಬ್ದಲಾಲಿತ್ಯ ಪದಬಳಕೆಯ ತಂತ್ರ, ಇವುಗಳಿಗೆ ಕಷ್ಟಪಡದೆ ತನ್ನಷ್ಟಕ್ಕೆ ತಾನೇ ಹೊಂದಿಕೊಂಡು ಶಾಸ್ತ್ರಿಗಳು ಕವನ ರಚಿಸಿದ್ದಾರೆ.

ಈ ಜಗತ್ತು ಆನಂದ ಮಯವಾಗಬೇಕಾದರೆ ಸತ್ಯ ಬೆಳಗಬೇಕು, ಮಿಥ್ಯ ಮರೆಯಬೇಕು, ನಿತ್ಯ ಸತ್ಯದ ತತ್ವಹರಡಬೇಕು. ಸತ್ಯ ಜ್ಯೋತಿಯು ಚಿತ್ತದಲ್ಲಿ ಬೆಳಗಬೇಕು ಎಂಬುದಾಗಿ 'ಆನಂದಮಯ' ಕವನ ಹೇಳುತ್ತದೆ.

"ಮೋಹಮುಳಿದು ಸೋಹಂ ಬೆಳೆದು

ಐಹಿಕ ಸುಖದ ದಾಹವಳಿದು

ದೇಹವು ತಾನೇ ದೇಗುಲವಾಗಿವೆ" ಆನಂದಮಯ...[೩]

ಎನ್ನುವ ಶಾಸ್ತ್ರಿಗಳು ಐಹಿಕ ಸುಖವನ್ನು ತೊರೆದು, ಸಂಸಾರ ಮೋಹವೆಂಬ ಅಂಧಕಾರದಿಂದ ಹೊರಬಂದರೆ ದೇಹವೇ ದೇಗುಲವಾಗುವುದು ಎಂದಿದ್ದಾರೆ.

ಸೃಷ್ಟಿಯ ಸಕಲ ಜೀವರಾಶಿಗಳಲ್ಲಿ ಶ್ರೇಷ್ಠವಾದುದೇ ಮಾನವ ಮನಸ್ಸೆಂಬ ಯಂತ್ರ ಪ್ರಸ್ತುತ 'ಯಂತ್ರ' ಕವನದಲ್ಲಿ ಮಾನವ ತಾನೂ ಶ್ರೇಷ್ಠ ಜೀವಿಯಾಗಿದ್ದುಕೊಂಡು ಭೋಗದ ಜೀವನ ನಡೆಸುತ್ತಾ ಇಹ ಪರವನ್ನು ಮರೆತ ರೀತಿಯನ್ನು ಹೇಳಿದ್ದಾರೆ. ಹಕ್ಕಿಯಂತೆ ಸ್ವಚ್ಛಂದವಾಗಿ ಹಾರಾಡಲು ಬಯಸಿದ ಮನೆ, ಬಣ್ಣಬಣ್ಣದ ಬದುಕಿಗೆ ಮನಸೋತು, ಮನದಾಳದಲ್ಲಿ ಕೊಳೆಯನ್ನು ತುಂಬಿಕೊಂಡು ತನಗೆ ಸರಿಸಾಟಿಯಾರಿಲ್ಲವೆಂದು ಮೆರೆಯುತ್ತಿದೆ ಭೋಗಕ್ಕಾಗಿ ಹಾತೊರೆದು, ರೋಗದ ಆಗರವಾದ ಈ ದೇಹ

"ನೀರಿನ ಗುಳ್ಳೆಯ ಹೋಲುವುದು ತಾ

ಚಿರವೆಂದುರೆ ಮೆರೆದಾಡುವುದಾ"[೪]

ನೀರಗುಳ್ಳೆಯಂತೆ ಕೆಲನಿಮಿಷದ ಬಾಳೆಂಬ ಸತ್ಯವ ತಿಳಿಯದೆ, ಚಿರವೆಂಬ ಭ್ರಮೆಯಲ್ಲಿ ಮೆರೆದಿವೆ. ಈ ದೇಹವೆಂಬ ಯಂತ್ರಕ್ಕೆ ಭಗವಂತನೇ ಸೂತ್ರಧಾರಿ ಎಂಬುದು ಮರೆತು, ಅಕ್ರಮ ವಕ್ರಭಾವ, ದ್ವೇಷ ಅಸೂಯೆಗಳಂತಹ ನಾರುವ ಭಾವನೆಗಳಿಂದ ಕೂಡಿರುವ, ಮುಖವಾಡವ ಧರಿಸಿ ತೋರಿಕೆಯ ಬದುಕನ್ನು ಬಾಳುತ್ತಾ ತನ್ನ ಹುಟ್ಟಿನ ಉದ್ದೇಶವನ್ನೇ ಮರೆತಿರುವ ಮಾನವ ಬದುಕು ಯಂತ್ರವಾಗುತ್ತಿರುವ ಪರಿಯನ್ನು ಇಲ್ಲಿ ಹೇಳಲಾಗಿದೆ.

ಕವಿಯ ಮನದ ಅಭಿಲಾಷೆ 'ಬೇಕು' ಎಂಬ ಕವನದಲ್ಲಿ ಮೂಡಿ ಬಂದಿದೆ. ಭಾವನೆಗಳ, ಜೊತೆಗೂಡಿ, ದೇವನೊಳಗೊಂದಾಗಿ ಬಾಳುವುದೇ ಈ ಬದುಕಿನ ಪರಮಾರ್ಥ ಎಂದು ಹೇಳುವ ಕವಿಗೆ "ತಿಳಿ ಹೊಳೆಯ ಜಲಧಿ ಮೈತೊಳೆದು, ಮಂದ ಮಾರುತದೊಡನೆ ಸುಳಿದಾಡುವ ಬಯಕೆ" ಈ ಮಾತುಗಳಲ್ಲಿ ಅದಮ್ಯ ಜೀವನೋತ್ಸಾಹವನ್ನು ಕಾಣಬಹುದು.

"ನಿಚ್ಚಳದ ಗಗನದೊಳಚ್ಚ ಬಿಳಿ ಮೋಡದೊಲು

ನಿಚ್ಚಟದಿ ಸಂಚರಿಪ ನಿಯಮಬೇಕು"

ಒಳಬೆಳಕಿನೊಳು ಸಾರಿ ಕಳವಳದ ಕೊಳೆ ತೂರಿ

ಒಳಹೊರಗೆ ಒಂದಾಗಿ ಬೆಳಗಬೇಕು"[೫]

ಈ ಜಗತ್ತು ಆನಂದ ಮಯವಾಗಬೇಕಾದರೆ ಸತ್ಯ ಬೆಳಗಬೇಕು, ಮಿಥ್ಯ ಮರೆಯಬೇಕು, ನಿತ್ಯ ಸತ್ಯದ ತತ್ವಹರಡಬೇಕು. ಸತ್ಯ ಜ್ಯೋತಿಯು ಚಿತ್ತದಲ್ಲಿ ಬೆಳಗಬೇಕು ಎಂಬುದಾಗಿ 'ಆನಂದಮಯ' ಕವನ ಹೇಳುತ್ತದೆ.

"ಮೋಹಮುಳಿದು ಸೋಹಂ ಬೆಳೆದು
ಐಹಿಕ ಸುಖದ ದಾಹವಳಿದು
ದೇಹವು ತಾನೇ ದೇಗುಲವಾಗಿವೆ" ಆನಂದಮಯ...[೩]

ಎನ್ನುವ ಶಾಸ್ತ್ರಿಗಳು ಐಹಿಕ ಸುಖವನ್ನು ತೊರೆದು, ಸಂಸಾರ ಮೋಹವೆಂಬ ಅಂಧಕಾರದಿಂದ ಹೊರಬಂದರೆ ದೇಹವೇ ದೇಗುಲವಾಗುವುದು ಎಂದಿದ್ದಾರೆ.

ಸೃಷ್ಟಿಯ ಸಕಲ ಜೀವರಾಶಿಗಳಲ್ಲಿ ಶ್ರೇಷ್ಠವಾದುದೇ ಮಾನವ ಮನಸ್ಸೆಂಬ ಯಂತ್ರ ಪ್ರಸ್ತುತ 'ಯಂತ್ರ' ಕವನದಲ್ಲಿ ಮಾನವ ತಾನೂ ಶ್ರೇಷ್ಠ ಜೀವಿಯಾಗಿದ್ದುಕೊಂಡು ಭೋಗದ ಜೀವನ ನಡೆಸುತ್ತಾ ಇಹ ಪರವನ್ನು ಮರೆತ ರೀತಿಯನ್ನು ಹೇಳಿದ್ದಾರೆ. ಹಕ್ಕಿಯಂತೆ ಸ್ವಚ್ಛಂದವಾಗಿ ಹಾರಾಡಲು ಬಯಸಿದ ಮನೆ, ಬಣ್ಣಬಣ್ಣದ ಬದುಕಿಗೆ ಮನಸೋತು, ಮನದಾಳದಲ್ಲಿ ಕೊಳೆಯನ್ನು ತುಂಬಿಕೊಂಡು ತನಗೆ ಸರಿಸಾಟಿಯಾರಿಲ್ಲವೆಂದು ಮೆರೆಯುತ್ತಿದೆ ಭೋಗಕ್ಕಾಗಿ ಹಾತೊರೆದು, ರೋಗದ ಆಗರವಾದ ಈ ದೇಹ

"ನೀರಿನ ಗುಳ್ಳೆಯ ಹೋಲುವುದು ತಾ
ಚಿರವೆಂದುರೆ ಮೆರೆದಾಡುವುದಾ"[೪]

ನೀರಗುಳ್ಳೆಯಂತೆ ಕೆಲನಿಮಿಷದ ಬಾಳೆಂಬ ಸತ್ಯವ ತಿಳಿಯದೆ, ಚಿರವೆಂಬ ಭ್ರಮೆಯಲ್ಲಿ ಮೆರೆದಿವೆ. ಈ ದೇಹವೆಂಬ ಯಂತ್ರಕ್ಕೆ ಭಗವಂತನೇ ಸೂತ್ರಧಾರಿ ಎಂಬುದು ಮರೆತು, ಅಕ್ರಮ ವಕ್ರಭಾವ, ದ್ವೇಷ ಅಸೂಯೆಗಳಂತಹ ನಾರುವ ಭಾವನೆಗಳಿಂದ ಕೂಡಿರುವ, ಮುಖವಾಡವ ಧರಿಸಿ ತೋರಿಕೆಯ ಬದುಕನ್ನು ಬಾಳುತ್ತಾ ತನ್ನ ಹುಟ್ಟಿನ ಉದ್ದೇಶವನ್ನೇ ಮರೆತಿರುವ ಮಾನವ ಬದುಕು ಯಂತ್ರವಾಗುತ್ತಿರುವ ಪರಿಯನ್ನು ಇಲ್ಲಿ ಹೇಳಲಾಗಿದೆ.

ಕವಿಯ ಮನದ ಅಭಿಲಾಷೆ 'ಬೇಕು' ಎಂಬ ಕವನದಲ್ಲಿ ಮೂಡಿ ಬಂದಿದೆ. ಭಾವನೆಗಳ, ಜೊತೆಗೂಡಿ, ದೇವನೊಳಗೊಂದಾಗಿ ಬಾಳುವುದೇ ಈ ಬದುಕಿನ ಪರಮಾರ್ಥ ಎಂದು ಹೇಳುವ ಕವಿಗೆ "ತಿಳಿ ಹೊಳೆಯ ಜಲಧಿ ಮೈತೊಳೆದು, ಮಂದ ಮಾರುತದೊಡನೆ ಸುಳಿದಾಡುವ ಬಯಕೆ" ಈ ಮಾತುಗಳಲ್ಲಿ ಅದಮ್ಯ ಜೀವನೋತ್ಸಾಹವನ್ನು ಕಾಣಬಹುದು.

"ನಿಚ್ಚಳದ ಗಗನದೊಳಚ್ಚ ಬಿಳಿ ಮೋಡದೊಲು
ನಿಚ್ಚಟದಿ ಸಂಚರಿಪ ನಿಯಮಬೇಕು"
ಒಳಬೆಳಕಿನೊಳು ಸಾರಿ ಕಳವಳದ ಕೊಳೆ ತೂರಿ
ಒಳಹೊರಗೆ ಒಂದಾಗಿ ಬೆಳಗಬೇಕು"[೫]

ಎಂಬುದಾಗಿ ಮನದೊಳಗಿರುವ ಕಳವಳದ ಕೊಳೆ ತೊಳೆದು, ಶುಭ್ರಾಗಸದಲ್ಲಿ ಬಿಳಿಮೋಡಗಳ ಮಧ್ಯೆ ಸಂಚರಿಪ ಬಯಕೆ ತನ್ನದೆಂದೂ, ಅಂತರಂಗ ಬಹಿರಂಗ ಶುದ್ಧವಾಗಿ ಆಂತರ್ಯದಲ್ಲಿ ಜ್ಞಾನದ ಬೆಳಕು ಮೂಢಿ ಬರಬೇಕೆಂದು ಕವಿ ಆಶಿಸುತ್ತಾರೆ.

ನಿರ್ದಿಷ್ಟ ಗುರಿಯಿಲ್ಲದೆ ಅಲೆದಾಡುವ ಮನಸ್ಸನ್ನು ನಿರ್ದಿಷ್ಟ ಗುರಿಯತ್ತ ತಲುಪಿಸಲು ಭಗವಂತನಲ್ಲಿ ಮೊರೆಯಿಡುವುದೇ ಇವರ 'ಗುರಿಗಾಣಿಸು' ಕವನದ ಸಾರ

"ಒಳಹೊರಗೊಂದನು ಅರಿಯದೆ ನೊಂದೆನು
ತಳಮಳಗೊಂಡಿಹೆನೋ| ದೇವಾ ತಳಮಳಗೊಂಡಿಹೆನೋ|" [೬]

ಎಂದು ತಮ್ಮ ಮನದ ತಳಹುಳವನ್ನು ಹೇಳುತ್ತಾ

"ಸುಡುತಿದೆ ಬೇಸಿಗೆ ಪೊಡವಿಯನೆಲ್ಲವ
ಸುಡುಗಾಡಿದು ನೋಡೇ ದೇವಾ ಸುಡುಗಾಡಿದು ನೋಡೇ
ಅಡಿಯಿಡಲಾರೆನು ಗಡಿಯನೆ ಮರೆತೆನು
ಕಡೆ ಹಾಯಿಸೊ ಯನ್ನಾ! ಒಡೆಯಾ ಕಡೆಗಾಯಿಸೊ ಯೆನ್ನಾ!"[೭]

ಎಂದು ಸುಡುಗಾಡಿನಂತಿರುವ ಈ ಬದುಕಿನ ನಡುವೆ ಬಾಳಲಾರದೆ ತತ್ತರಿಸುವ ತನಗೆ ಗುರಿಗಾಣಿಸೆಂದು ಮೊರೆಯಿಡುತ್ತಿದ್ದಾರೆ.

ಆಸೆಗಳೆಂಬ ಮುಳ್ಳಿನ ತಿವಿತ, ದ್ವೇಷವೆಂಬ ದಳ್ಳುರಿಗೆ ಸಿಲುಕಿ ತತ್ತರಿಸುವಂತಾಗಿದೆ.

"ಬಿರುಗಾಳಿಯ ಬಲ್ ತೆರೆಗಿಳನೆಬ್ಬಿಸೆ
ಹೊರಳುತಲಿದೆ ನಾವೇ"[೮] ಎಂಬ ಮಾತುಗಳಲ್ಲಿ ಬದುಕೆಂಬ ದೋಣಿ ಬಿರುಗಾಳಿಗೆ ಸಿಕ್ಕು, ತೆರೆಗಳ ಸುಳಿಗೆ ಸಿಲುಕಿರುವುದು, ದಿಕ್ಕುಗಾಣದಿರುವ ಬದುಕಿನ ಈ ನಾವೆಗೆ ದಿಕ್ಸೂಚಿಯಾಗಿ ಗುರಿಗಾಣಿಸಬೇಕಾಗಿ ಭಗವಂತನಲ್ಲಿ ಕವಿ ಮನಸ್ಸು ಮೊರೆಯಿಡುತ್ತದೆ.

ಅಣು ರೇಣು ತೃಣ, ಕಾಷ್ಠಗಳಲ್ಲಿ ತುಂಬಿರುವ ಭಗವಂತನಲ್ಲೇ ಸರ್ವಶಕ್ತಿಯನ್ನು ಕಾಣುವ ಭಕ್ತಿ ಪಾರಮ್ಯ ಶಾಸ್ತ್ರಿಗಳದು, ಸರ್ವರನ್ನು, ಸರ್ವವನ್ನೂ ಒಳಗೊಂಡಿರುವ ಸರ್ವಶಕ್ತಿಯೇ ಪರಮಾತ್ಮನೆಂದೂ, ಆತನೇ ನಿರ್ವಿಕಲ್ಪ, ನಿರ್ವಚನೀಯವೆಂದು ಸಾರಿದ್ದಾರೆ.

ಆತ್ಮನೇ ಪರಮಾತ್ಮನೆಂಬ ತತ್ವಕ್ಕೆ ಬದ್ಧರಾಗಿ ಸೃಷ್ಟಿ, ಸ್ಥಿತಿ, ಲಯ ಕರ್ತನಾಗಿರುವ ಭಗವಂತ 'ಭಜಿಪರ ಭಾವದ ಬೆಳಕಾಗಿರುವನು' ಎಂದಿರುವರು.

"ಹುಟ್ಟಿಸಾವುದೀ ಜಡದೇಹ ಇದ
ಸುಟ್ಟರೇನು ಎಲುಬಿನಗೇಹ
ಕೆಟ್ಟಿವೆನಿಪುದೀ ಬರಿಮೋಹ ತಡೆ
ಗಟ್ಟಬೇಕು ಒಳಗಿನ ದಾಹ"[೯]

ಹುಟ್ಟುಸಾವಿನ ಮಧ್ಯೆಯ ಈ ಅಲ್ಪಬಾಳಿನಲ್ಲಿ ಭಗವಂತನ ಅಸ್ತಿತ್ವವನ್ನು ಅರಿಯಬೇಕಾದರೆ ಮನದೊಳಗಿನ ದಾಹ ತೀರಬೇಕು. ಮೋಹ ಅಳಿಯಬೇಕು, ನಾನಾ ಆಮಿಷಗಳಿಗೆ ಬಲಿಯಾದ ಈ ಎಲುಬಿನ ಗೇಹ ಇವನ್ನೆಲ್ಲ ಮೀರಿನಿಂತರೆ ಆತ್ಮದೊಳಗಿರುವ ಪರಮಾತ್ಮನ ಇರವು, ಸರ್ವಶಕ್ತಿಯ ಇರವು ಗೋಚರಿಸಲು ಸಾಧ್ಯ.

ತಾನೆನ್ನುವ ಅಹಂ ಅಳಿದು, ಅಜ್ಞಾನವೆಂಬ ಅಂಧಕಾರ ತೊಲಗಿ ಜ್ಞಾನ ಬೆಳಕಾಗಿ ಬರಲು ಸರ್ವಶಕ್ತಿಯೇ ಮೂಲಾಧಾರ ಎಂದಿದ್ದಾರೆ. ಶಾಸ್ತ್ರಿಯವರು ಸರ್ವಶಕ್ತಿಯಲ್ಲಿ ನಂಬಕೆಯಿರುವ ಜಗತ್ತಿನ "ಏಕನಾದ"ವನ್ನು ಕಾಣುವ ಭಾವ ಜೀವಿಯಾಗಿದ್ದಾರೆ.

ರಾಗ ದ್ವೇಷಗಳಿಂದ ಮುಕ್ತವಾದ ಹೊಸ ಜಗತ್ತಿನ ಸೃಷ್ಟಿಯಾಗಬೇಕೆಂದು 'ಭಾವಜೀವಿ' ಕವನದಲ್ಲಿ ಹೇಳುವ ಕವಿ ಬದುಕಿನ ಬೇಕು ಬೇಡಗಳ 'ತಾಕಲಾಟ' ದಿಂದ ಹೊರಬರಲು ಕರೆಯುತ್ತಿದ್ದಾರೆ.

"ಕೋಟಿ ವಸ್ತುಗಳನಿತ್ತರೇನು ಮತ್ತೊಂದು ಬಯಸದಿಹುದೇ
ಮನವು ಮತ್ತೊಂದ ಬಯಸದಿಹುದೇ
ಮತ್ತೊಂದ ಬಯಸದಿಹುದೇ ಬಯಕೆಗೆ ಇತಿಮಿತಿಯೊಂದಿಹುದೇ"[೫೦]

ಎಂಬ ಸಾಲುಗಳು ಮನಸ್ಸಿನ ಆಸೆಗಳಿಗೆ ಇತಿಮಿತಿಯೇ ಇಲ್ಲವೆಂದು ಹೇಳುತ್ತವೆ. ಮನಸ್ಸಿನ ಆಸೆಗಳು ಪೂರೈಸುವಂತಹ ಹೊಸದೊಂದು ಜಗದ ಸೃಷ್ಟಿಯಾಗಬೇಕೆನ್ನುವ ಭಾವಜೀವಿ ಕವಿತ್ವವನ್ನು ಇಲ್ಲಿ ಕಾಣಬಹುದು. ಭಗವಂತನ ಸೃಷ್ಟಿ ಅದ್ಭುತವಾದುದು. ರಮ್ಯಮನೋಹರವಾದುದೆಂದು ಆತನ ಸ್ತುತಿಗೈಯುತ್ತ, ಹಂತ ಹಂತಕ್ಕೂ ಹೊಸತನ ಬೀರಿ ನಗುತಿರುವ ಸೃಷ್ಟಿರಹಸ್ಯಕ್ಕಾಗಿ ಕವಿಯ ಮನ ಆಶ್ಚರ್ಯ ತಾಳಿದೆ.

"ಕಣ್ಣ ಹೊಳಹಿನಲಿ ಬಣ್ಣಬಣ್ಣಗಳ ಕವಿಸಿ ಕಾಣಿಸಿರುವೆ.
ಬಿನ್ನಾಣವ ಬೀರಿರುವೆ"[೫೧]

ಎಬ ಸೃಷ್ಟಿ ಸೌಂದರ್ಯಕ್ಕೆ ಮನಸೋತ ಕವಿ ಹೃದಯ ಕುಸುಮದೊಳಗೆ ಪೊಸಗಂಧವಿರಿಸಿದ ಭಗವಂತ, ನಿಶೆಯ ಮುಸುಕಿನೊಳು ಮುಸುಕಿ ಕಣ್ಣನ್ನು, ಹರಕು ಮೋಡಗಳ ಬಿರುಕಿನೊಳಗೆ ಚಂದ್ರಮನ ನೋಟ ಜೊತೆಗೆ ಮಂದಾನಿಲವನ್ನಿರಿಸಿದ್ದು ಆತನ ಅದ್ಭುತ ಸೃಷ್ಟಿಗೆ ದ್ಯೋತಕವಾಗಿದೆ, ಎಂದು ಸೋಜಿಗ ಪಟ್ಟಿದ್ದಾರೆ.

ಭಗವಂತನ ಸ್ತುತಿಯಾಗಿ ಬಂದ ಕವನಗಳಲ್ಲಿ ಇನ್ನೊಂದು ಮುಖ್ಯವಾದ ಕವನ 'ಭಂಗಿ' ಲೋಕ ಮಾತೆಯನ್ನು ಸ್ತುತಿಸುತ್ತಾ, ಭಂಗಿಯಾಗಿ, ಮಂಗಳಾಂಗಿಯಾಗಿ ತನ್ನನ್ನು ಹರಸಬೇಕೆಂದೂ ಮುಕ್ತಿಯತ್ತ ಕರೆದೊಯ್ಯಬೇಕೆಂಬ ಪ್ರಾರ್ಥನೆ ಸಲ್ಲಿಸುತ್ತಿದ್ದಾರೆ.

"ಹಾರಾಡುತಲಿಹ ಮನವನು ತಡೆದು
ಪೋರಾಡುತಲಿಹ ತನುವನು ಬಡಿದು

ಚೀರಾಡುವ ನಾಲಗೆಯನು ಹಿಡಿದು
ಏರಾಟದ ಕರಣಂಗಳ ಕೆಡೆದು
ಪೇರಾನಂದ ಜ್ಯೋತಿಯ ಪಿಡಿದು
ದಾರಿಯ ತೋರಿಸು ನೀ ಮುನ್ನಡೆದು ಭಂಗಿ..."[೨]

ಎಂಬುದಾಗಿ ತನ್ನ ಮನದ ಚಂಚಲತೆಯು ದೂರವಾಗಿ, ದೈಹಿಕವಾದ ಕಾಮನೆಗಳು ದೂರವಾಗಿ, ನಾಲಗೆ ಚಪಲವು ಹೋಗಿ ಪಂಚೇಂದ್ರಿಯಗಳ ನಿಯಂತ್ರಿಸಿ ನಿನ್ನಯ ಆನಂದ ಜ್ಯೋತಿಯ ಪಿಡಿದು ಬದುಕಿನ ದಾರಿಯ ಮುನ್ನಡೆಸೆಂಬುದಾಗಿ ಬೇಡುತ್ತಾರೆ. ಭಾವಬಂಧನಗಳ ಸಂಕಷ್ಟದಿಂದ ತನ್ನನ್ನು ಪಾರುಮಾಡೆಂದೂ, ಮನದ ಮೈಲಿಗೆಯು ದೂರವಾಗಿ ಅಷ್ಟಮದಗಳು ನಳಿಸಿ, ಏಕಾಗ್ರ ಮನವು ಮಾಡಲೆಂದು ಹರಕೆ ಸಲ್ಲಿಸುತ್ತಾರೆ.

ಬದುಕನ್ನು ಆನಂದಮಯವಾಗಿ, ಸರ್ವಸಮತಾ ನೀತಿಯನ್ನು ತೋರಿ ಶಮದಮ ಶಾಂತಿಯ ಸದನವನ್ನಾಗಿ ಈ ದೇಹವನ್ನು ನಿರ್ಮಿತಿಗೊಳಿಸಿ ಬದುಕಿನ ಕತ್ತಲೆಯ ತೂರಿ ಬೆಜ್ಯೋತಿಯ ಬೆಳಗಿ, ಶಾಂತಿಯತ್ತ ನಡೆಸೆಂಬುದಾಗಿ ಕಳಕಳಿಯ ಪ್ರಾರ್ಥನೆ ಸಲ್ಲಿಸುತ್ತಾರೆ.

ಇವರ ಹಲವು ಕವನಗಳು ಹುಟ್ಟು ಸಾವುಗಳ ಬಗೆಗೆ, ಜೀವನದ ಬಗೆಗೆ ಹೇಳುವಂತವು ಯಾವೂರಿಂದ ಬಂದೆ, ನಗು, ಸಂತೆ ಈ ಕವನಗಳು ಬದುಕಿನ ಬಗ್ಗೆ ಹೇಳುತ್ತವೆ.

ಈ ಜೀವನವೆಂಬ ಪ್ರಯಾಣದಲ್ಲಿ ನೋವು ನಲಿವುಗಳನ್ನು ಮೀರಿ, ಪ್ರಯಾಣ ಸಾಗಬೇಕು ಎಂಬುದಾಗಿ 'ಯಾವೂರಿಂದ ಬಂದೆ' ಕವನ ಹೇಳುತ್ತದೆ. ಜೀವನವೆಂಬ ಪ್ರಯಾಣದಲ್ಲಿ ಎಡರು ತೊಡರುಗಳು ಬರುವುದು ಸರ್ವೆಸಾಮಾನ್ಯ ಹೀಗಿರಲು ಅತಿವ್ಯಥೆಗೊಳ್ಳುವುದು, ಒಳಗೊಳಗೆ ಕುದಿಯುವುದು ಸಲ್ಲವೆಂದು, ಜೀವನ ಶಾಪವೆಂದು ಹೇಳುತ್ತಾರೆ. ಇಲ್ಲಿ ಕವಿಯ ಅದಮ್ಯ ಜೀವನ ಪ್ರೀತಿಯನ್ನು ಗುರುತಿಸಬಹುದು.

"ಬಂದಿಹುದಾಗದೆ ಈವರೆಗೆ ಇದು ನಿಂದು ನೋಡು ನೀ ಕಡೆವರೆಗೆ
ಅಂದವೋ ಬಂಧವೋ ಇದರೊಳಗೆ ಈಯಂದವ ನೀನೋಡೊಳಹೊರಗೆ
ನಿಂದು ಯೋಚಿಸುವ ಗಳಿಗೆ ಹೊಂದಿನೋಳಿಕೊಳ್ಳೊಳಗೊಳಗೇ"[೩]

ಹುಟ್ಟಿದ ಮಾನವ ತನ್ನ ಹುಟ್ಟಿನ ಉದ್ದೇಶವ ಅರಿತು, ಬದುಕಿನೆಲ್ಲಾ ಬವಣೆಗಳಿಗೂ ಎದೆಗೊಡದೆ ಸಾರ್ಥಕ್ಯವನ್ನು ಸಾಧಿಸಬೇಕು ಎಂಬುದಾಗಿ ಜೀವನ ಪ್ರೀತಿಯನ್ನು ಜನಮನದಲ್ಲಿ ಮೂಢಿಸುವತ್ತ ಕವಿಯ ಮನಸ್ಸು ಸಾಗಿದೆ.

ಶ್ರೀಯುತ ಕೃಷ್ಣಶಾಸ್ತ್ರಿಯವರ 'ನಗು' ಕವನ ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಿಂದಳೋ ಅನ್ನುವ ಪಂಜೆಮಂಗೇಶರಾಯರ ಹುಟ್ಟೂರಿನ ಹಾಡಿನ ಪ್ರಾಸಬದ್ಧ ಲಯವನ್ನು ನೆನಪಿಸುತ್ತದೆ.

"ನಗುನಗುತ ನಲಿದಾಡು ನಿರುತವು ಹಗುರವಾಗಲಿ ಜೀವನ
ಸೊಗದ ಸುಧೆಯನು ಜಗಕೆ ಬೀರುತ ಮುಗುಳನರಳಿಸು ಮನಸಿನ

ನಗುವೆ ಹೃದಯದ ಗಾಯನ

ನಗುವೆ ನೈಜದ ಸಾಧನ

ನಗುವೆ ನಾಕದ ಭೋಜನ"[೧೪]

ಎಂದು ಪ್ರಾರಂಭವಾಗುವ ಕವನ 'ನಗುವೇ ಜೀವನ', ನಗುವೇ ಸ್ವರ್ಗಕ್ಕೆ ಸಾಧನ ಎನ್ನುತ್ತಾರೆ. ರೋಗದಿಂದಲೂ ಮುಕ್ತಿಗೊಳಿಸುವ ನಗುವಿನಿಂದಲೇ ವೇದಗಳ ಪರಮಾರ್ಥವು ಎಂದಿದ್ದಾರೆ. ನೋವು ನೋವನು ಮರೆಸಿ ನಿರ್ಮಲ ಭಾವ ಜಲಧಿಯ ಸಾರಿ, ದೇವನತ್ತ ಸಾಗಲಿದೆ ಸಾಧನವೆಂಬುದು ಕವಿಯ ಅಭಿಪ್ರಾಯ. ಜೀವನವೆಂಬ ಸರೋವರದಲ್ಲಿ ನಗೆ ಝರಿಯು ಹರಿದು ಬರಲಿ, ನಗುವಿನ ತಿಳಿಜಲದಲ್ಲಿ ಕಷ್ಟ ನಷ್ಟಗಳು ತೇಲಲಿ ಎಂದು ಹರಸುತ್ತಾ, ಮನದ ಮಲಿನವ ತೊರೆದು, ಅನವರತ ನಗೆಮುಖದಿ ನಗುನಗುತ್ತ ಭಗವಂತನ ಅರಿಯುವಿಕೆಯೇ ಬದುಕಿನ ಪರಮ ಪುರುಷಾರ್ಥ ಎಂದಿದ್ದಾರೆ.

ಬದುಕನ್ನು ಸಂತೆಗೆ ಹೋಲಿಸುತ್ತಾ ಕವಿ "ಚಿಂತೇ ಬಿಟ್ಟು ಸಂತೆ ಮಾಡೋ ಭ್ರಾಂತಿ ಪಡಬೇಡೋ" ಎನ್ನುತ್ತಾ, ಭ್ರಾಂತಿ ಚಿಂತೆಯ ಬಿಟ್ಟು ಬದುಕೆಂಬ ಗಾಡಿ ಸಾಗಬೇಕು ಎಂದಿದ್ದಾರೆ. ಬದುಕಿನ ನಿರಂತರ ಪಯಣ ಸಾಗುತ್ತಿರಲು.

"ಉಬ್ಬರವಿಳಿತಗಳಿರುವುದ ಕಂಡು ಅಬ್ಬಾ! ಎನಬೇಡೋ ಬೆದರಿ

ಅಬ್ಬಾ! ಎನಬೇಡೋ"[೧೫]

ಬದುಕಿನಲ್ಲಿ ಬರುವ ಕಷ್ಟ ಸುಖಗಳೆಂಬ ಉಬ್ಬರ ಇಳಿತಕ್ಕೆ ಹಿಂಜರಿಯದೆ ಧೈರ್ಯದಿಂದ ಎದುರಿಸಬೇಕು ಎಂಬುದಾಗಿ ಎಚ್ಚರಿಸಿದ್ದಾರೆ. ಬದುಕೆಂಬ ಸಂತೆಯಲ್ಲಿ ತನ್ನಲ್ಲಿರುವುದನ್ನು ಪರರಿಗೂ ಹಂಚಿ, ಪರರೊಡನೆ ಕಾದಾಟಕ್ಕಿಳಿಯದೆ ಬದುಕು ಸಾಗಬೇಕೆಂದಿದ್ದಾರೆ.

"ಹಾರಾಟವನುಳಿದೆಲ್ಲರ ಸಂಗಡ ಬೆರೆತುಕೊಳ್ಳಬೇಕೋ ಸಂತೆಲಿ

ಕಲೆತುಕೊಳ್ಳಬೇಕೋ"[೧೬]

ಬದುಕೆಂಬ ಸಂತೇಲಿ ಕಲೆತು ಬೆರೆತು ಬಾಳಬೇಕೆಂದು ಹೇಳುತ್ತಾ ಜೀವನದ ಸಂಧ್ಯಾ ಸಮಯ (ಸಾವು) ಬರುವವರೆಗೂ ಈ ಸಂತೆ ನಿರಂತರ ಸಾಗಬೇಕೆನ್ನುವ ಮೂಲಕ ಕವನ ಕೊನೆಯಾಗುತ್ತದೆ.

ಶ್ರೀಯುತ ಶಾಸ್ತ್ರಿಗಳು ಆಧ್ಯಾತ್ಮದತ್ತ ಅತೀವ ಒಲವನ್ನು ಬೆಳೆಸಿಕೊಂಡವರು. ಹಾಗಾಗಿಯೇ ಸಾಧಕನ ಬದುಕಿನ ದಾರಿ ಹೇಗಿರಬೇಕೆಂಬ ಬಗ್ಗೆ ಕವನದಲ್ಲಿ ಮಾರ್ಗದರ್ಶನ ನೀಡಿದ್ದಾರೆ.

ಚಂಚಲವಾದ ಮನಸ್ಸಿಗೆ ಅಡಿಯಾಳಾಗಿರುವ ಮನುಷ್ಯನ ಹೀನ ಸ್ಥಿತಿಯನ್ನು ಕಂಡು 'ಬೆಚ್ಚಕ್ತಿ' ಕವನದಲ್ಲಿ

"ಬಣ್ಣದ ಭೂತವ ಕಂಡು ಆ ಗನ್ನವನೇ ಸವಿಯೆಂದು

ಕಣ್ಣಲಿ ಕಂಡುದೆ ನನ್ನಿಯೆಂದು

ನನ್ನದೆಂದೇ ಮನದಲಿ ತಂದು

ಬನ್ನಬಡುತಲಿಹುದೇತರದೋ ಬರಿ

ಮಣ್ಣಾಗುವ ಓ ಸಣ್ಣಮನುಜನೇ ನಿನ್ನ ದೇನಿಹುದೋ"[೫೭]

ಎಂದು ಮಣ್ಣಲ್ಲಿ ಮಣ್ಣಾಗುವ ನಶ್ವರ ದೇಹದ ಮನುಜ ಬಣ್ಣದ ಬದುಕಿಗೆ ಮನಸೋತಿರುವ ಮೂರ್ಖತೆಯನ್ನು ಕುರಿತು ಗೇಲಿ ಮಾಡಿದ್ದಾರೆ.

ಇಹ ಪ್ರಪಂಚದ ಆಸೆ, ಸ್ವಾರ್ಥಕ್ಕೆ ಬಲಿಯಾಗಿ ಬಾಳಿನ ನಿಜಧರ್ಮದ ಮರೆತು ಹೆಣಗಾಡುತ್ತಿರುವ ರೀತಿಯನ್ನು ಖಂಡಿಸಿ "ಹೆಣಸಾಗುವ ಓ ಒಣ ಮಾನವನೇ ನಿನ್ನದೇನಿಹುದೋ"[೫೮] ಎಂದಿದ್ದಾರೆ.

ನನ್ನವರು ತನ್ನವರೆಂಬ ಅತಿಶಯದ ಮೋಹದಲಿ ಸಿಲುಕಿ ತಾನೇ ಸರಿ, ತನ್ನದೇ ಸರಿ ಎಂಬ ಅಹಂಕಾರ ಮದದಲಿ ಬೆರೆತು ಕೊನೆಗೆ ಮೃತ್ಯುವಿನಲ್ಲಿ ಪರ್ಯಾವಸಾನವಾಗುವ ಈ ದೇಹ ಪರಮಾತ್ಮನನ್ನು ನೆನೆಯುವುದೇ ಸಾಧನೆಯ ಮಂತ್ರ ಎಂದಿದ್ದಾರೆ.

ಆತ್ಮನೇ ಪರಮಾತ್ಮನೆಂಬ ಸಂಶಯ ತಾಳದೆ ಸಾಧಕ ಸಾಧನೆಯತ್ತ ಹೆಜ್ಜೆಹಾಕಬೇಕೆಂದು "ನೀನೇ ತಾನು" ಕವನ ಹೇಳುತ್ತದೆ.

"ಬಿರುಗಾಳಿ ಬಡಿತದಲಿ ತರಂಗ ದುಡಿತದಲಿ

ಮರವೆಯ ಮುಸುಕಿನಲಿ ನೀರಧಿಯ ನೆನಪಿರಲಿ

ಸತ್ತನೆಂದಳಲೇಕೋ ಮಿಥ್ಯವೆಂದನಲೇಕೋ

ಸತ್ಯದ ನೆಲೆಯರಿತು ನಿತ್ಯನಾಗಿರಬೇಕು"[೫೯]

ಬದುಕಿನ ಕಷ್ಟ, ಸುಖಗಳ ಮಧ್ಯೆ ಕಾಯಕ ನಿಷ್ಠೆಯಲಿ ಬಾಳಿ, ನೆನಪು ಮರೆವುಗಳ ಗಡಿಯನ್ನು ದಾಟಿ, ಹುಟ್ಟು, ಸಾವುಗಳ ದ್ವಂದ್ವವನ್ನು ಮೀರಿ, ಬಾಳಿನ ನಿಜಸತ್ವವರಿತು ಬಾಳುವುದೇ ಸಾಧಕನ ಬದುಕಿನ ನಿಜಧರ್ಮವಾಗಿದೆ ಎಂದಿದ್ದಾರೆ.

ಸಾಧಕ ತನ್ನ ಸಾಧನೆಯ ದಾರಿಯಲ್ಲಿ ಪಯಣಿಸಿ ಆಧ್ಯಾತ್ಮದತ್ತ ಸಾಗಬೇಕು. ಕೃಷ್ಣಶಾಸ್ತ್ರಿಯವರದು ಆಧ್ಯಾತ್ಮದ ಬದುಕು, ಹಾಗಾಗಿಯೇ ಅವರ ಕೆಲವು ಕವನಗಳು ಅನುಭಾವದತ್ತ, ಆಧ್ಯಾತ್ಮದತ್ತ, ಸಹೃದಯರನ್ನು ಸೆಳೆಯುತ್ತವೆ.

ಕಾಲಕ್ಕೆ ಹೆದರಿ ಮೂಲೆಗುಂಪಾಗದೆ ಬದುಕಿನಲ್ಲಿ ಸಾರ್ಥಕತೆಯನ್ನು ಕಾಣಬೇಕು ಎಂಬುದನ್ನು 'ಏಳೇಳೋ ಜಾಣ' ಕವನದಲ್ಲಿ ಕವಿ ಆಧ್ಯಾತ್ಮದತ್ತ ಜನರನ್ನು ಸೆಳೆದಿದ್ದಾರೆ. ಮಾನವ ಜನ್ಮ ಶ್ರೇಷ್ಠ ಎಂಬುದನ್ನು "ಯಾವ ಜನ್ಮದ ಫಲವೋ ಯಾರು ಹಾಕಿದ ಹೂವೋ"[೬೦] ಎಂಬ ಮಾತಿನ ಮೂಲಕ ಹೇಳಿ ಬದುಕಿನಲ್ಲಿ ಬರುವ ಎಡರು-ತೊಡರುಗಳು ಭಗವಂತನ ಲೀಲೆ ಎನ್ನುತ್ತಾರೆ.

ಸಂಸಾರದ ರಾಗ ದ್ವೇಷಗಳಿಗೆ ಬಲಿಯಾಗಿ ಗಾಳಿಗೋಪುರ ಕಟ್ಟಿಗೋಳಾಡದೆ ಬದುಕಿನ ವಾಸ್ತವ ಸತ್ಯಗಳತ್ತ ದೃಷ್ಟಿ ಹರಿಯಬೇಕು ಮನವೆಂಬ ಮರ್ಕಟಕ್ಕೆ ಮನಸೋತು ಅನುಮಾನ, ಅಂಜಿಕೆಯ ದಾಸನಾಗದೆ "ಹತ್ತಿ ಇಳಿವ ನಿನ್ನ ಚಿತ್ತವೃತ್ತಿಯ ತಡೆದೊತ್ತರಿಸೋ ಅಣ್ಣ" ಎಂದು ಉಚ್ಚರಿಸಿದ್ದಾರೆ.

"ನಾಕಲೋಕಕೆ ಮೀರಿ ಕೇಕೆ ಹಾಕಲಿಬೇಕು ತಾಕಿಟ ತನಿರಸದೆ."[೨೧] ಎಂದು ಆಧ್ಯಾತ್ಮದತ್ತ ಮನವು ವಾಲಬೇಕೆಂದಿದ್ದಾರೆ.

ಬದುಕಿನಲ್ಲಿ ಅರ್ಥವನ್ನೇ ಕಾಣದೆ ಬದುಕುವ ಮೂಳರನ್ನು ಎಚ್ಚರಿಸುತ್ತಾ

"ಹಾಳು ಮಾಡಿದಲ್ಲೋ ನಿನ್ನ ಬಾಳಾ

ಏಳೇಳೋ ಕೊಡವೋ ಈ ಧೂಳಾ"[೨೨] ಎಂದಿದ್ದಾರೆ ಪ್ರಸ್ತುತ ಈ ಮೂಳ ಕವನದಲ್ಲಿ ಕವಿ ಕಾಯಕದ ಮಹತ್ವವನ್ನರಿತು ದುಡಿದು ತಿನ್ನದೆ ಸೋಮಾರಿಗಳಾಗಿ ನಿಟ್ಟುಸಿರು ಬಿಡುವುದು ಮೂಳರ ಲಕ್ಷಣ, ಹಾಗಾಗಿ ಕಾಯಕವನ್ನೇ ಕೈಲಾಸವೆಂದು ಮನದ ಕೆಟ್ಟ ಭಾವನೆಗಳನ್ನು ಹೊಡೆದೋಡಿಸುವುದೇ ಬದುಕಿನ ನಿಜ ಅರ್ಥ ಎಂದಿದ್ದಾರೆ. ಬದುಕಿನಲ್ಲಿ ಬರುವ ಎಡರು ತೊಡರುಗಳಿಗೆ ಅಂಜದೆ ಅಳುಕದೆ ಮುನ್ನುಗ್ಗುವುದೇ ಧೀರತನವೆಂದಿದ್ದಾರೆ. ಕಷ್ಟಕ್ಕೆ ಹೆದರಿ ಬದುಕಿಗೆ ಬೆನ್ನು ತೋರಿಸದೆ ದಿಟ್ಟ ಸಾಹಸದಿಂದ

"ಘಟ್ಟಿಹಾಕೋ ವಿಧಿಗೆ ಮೂಗುದಾಣ"[೨೩] ಎಂದು ಹೇಳುತ್ತಾ ಜಗವೆಂಬ ಭಗವಂತನ ಲೀಲಾ ನಾಟಕ ರಂಗದಲ್ಲಿ ವ್ಯರ್ಥಕಾಲಕಳೆಯದೆ ಧೈರ್ಯದಿಂದ ತನ್ನಪಾಲಿನ ದುಡಿಮೆ ಪೂರೈಸಿ ಗೆಲುವನ್ನು ಸಂಪಾದಿಸುವುದೇ ಮೋಕ್ಷಕ್ಕೆ ಹಾದಿ ಎಂದಿದ್ದಾರೆ.

ಬದುಕಿನಲ್ಲಿ ಅರಿಷಡ್ವರ್ಗಗಳೇ ಶತ್ರುಗಳೆಂಬ ವಾದವನ್ನು ವಾಸ್ತವಿಕ ಒರೆಗಲ್ಲಿಗೆ ತಿಕ್ಕಿ ಸಂಸಾರದಲ್ಲಿದ್ದುಕೊಂಡೇ ರಾಗ ದ್ವೇಷಗಳ ಜೊತೆಗಿದ್ದುಕೊಂಡೇ ಆಧ್ಯಾತ್ಮದತ್ತ ಹೇಗೆ ಸಾಗುವುದು ಎಂಬುದನ್ನು 'ಆರು' ಕವನ ಬಿಂಬಿಸುತ್ತದೆ.

ಮನುಷ್ಯನಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮಧ, ಮಾತ್ಸರ್ಯವಿರುವುದು ಸಹಜವೆಂದಾದರೂ ಅವುಗಳ ನಿಯಂತ್ರಣವೂ ಅವನಲ್ಲಿಯೇ ಇದೆ. ಎಂದು ಹೇಳುತ್ತಾ

"ಆರು ಆರೆಂದು ಪಳಿವಿರಿ ಅರಿತರೆ

ಆರೇ ಅಮರತ್ವದ ದಾರೀ"[೨೪] ಎಂದಿದ್ದಾರೆ

ಕಾಮವಿರಲು ಬೇಕು ಆದರೆ ಅದರೊಳು ನೇಮವಿರಬೇಕೆಂದು ವ್ಯಾದಿ ಹರಿಪ ಕ್ರೋಧವೇ ಮೋದವಾಗಿರಬೇಕೆಂದು, ಲೋಭವೇ ಲಾಭವಾಗಿರಬೇಕೆಂದೂ, ಸತ್ಯಜ್ಯೋತಿಯ ಮೋಹದ ದಾಹವೊಂದಿರಬೇಕೆಂದೂ ಮದದೊಳು ಮದವ ಹೊಂದಿರಬೇಕೆಂದು ಮತ್ಸರದ ಜೊತೆ ಉತ್ಸಾಹವಿರಬೇಕೆಂದಿದ್ದಾರೆ. ಹೀಗೆ ಈ ಆರು ಶಕ್ತಿಗಳು ಅಮರತ್ವದತ್ತ ಮನುಷ್ಯನನ್ನು ಕೊಂಡೊಯ್ಯಬಹುದೆಂಬುದನ್ನು ಪ್ರಸ್ತುತ ಪದ್ಯ ತಿಳಿಸುತ್ತದೆ.

"ಶಾಸ್ತ್ರಿಯವರು ಒಬ್ಬ ವ್ಯಕ್ತಿಯಲ್ಲ ಒಂದು ಸಂಸ್ಥೆ" ಎಂದು ತ.ಸು.ಶ್ಯಾಮರಾಯರು ಹೇಳಿದ್ದಾರೆ. ಇವರ ಸಾಮಾಜಿಕ ಕಳಕಳಿಗೆ ಹಲವು ನಿದರ್ಶನಗಳಿವೆ. ಇವರ ಕುಲ 'ಎರಡಿಲ್ಲ', 'ಎಲ್ಲ ಮಾತಿನ ಭೇದ' ಕವನಗಳಲ್ಲಿ ಸಾಮಾಜಿಕ ಸ್ವಾಸ್ಥ್ಯದ ಕಳಕಳಿ ಇದೆ. ವೈಧಿಕ ಕುಲದಲ್ಲಿ ಜನಿಸಿದರೂ ಕುಲದ ಬಗೆಗಿನ ಅಹಂನ್ನು ಎಂದೂ ಹೊಂದಿದವರಲ್ಲ ಯಾವುದೇ ರೀತಿಯ ಜಾತಿಯ ಕಟ್ಟುಪಾಡುಗಳಿಗೆ ಒಳಗಾದವರಲ್ಲ.

ಹಿಂದೂ ಧರ್ಮದ ಧ್ಯೇಯ ಸರ್ವತ್ರ ಸಮಭಾವ ಎಂಬ ತತ್ವದಲ್ಲಿ ನಂಬಿಕೆ ಇರಿಸಿಕೊಂಡಿರುವ ಶಾಸ್ತ್ರಿಯವರು "ಒಲವನ್ನು ಕೆಡಿಸುವ ಛಲವನ್ನು ಹಿಡಿಸುವ ಕುಲವೇ ಹೊಲೆಯಲ್ಲವೇ ನೋಡೆ"[೨೫] ಎಂದಿದ್ದಾರೆ. ಮಡಿಮಡಿಯೆಂದು ಗುಡಿಯೊಳಗೆ ಹಾರಾಡಲು ಸಕಲ ಜೀವರಾಶಿಗಳಲ್ಲಿ ತುಂಬಿರುವ ದೈವಕ್ಕೆ ಗುಡಿಯೊಳಗಷ್ಟೇ ಮೈಲಿಗೆಯೇ ಎಂದಿದ್ದಾರೆ.

ಜನಿವಾರ ಧರಿಸಿದ ಮಾತ್ರಕ್ಕೆ ಭೂಸುರರೆನಿಸಿಕೊಳ್ಳುವರೇ? ಕಲ್ಲುಕಟ್ಟಿದವರೆಲ್ಲ ಕೈಲಾಸವಾಸಿಗಳೇ, ಮಿಂದವರೆಲ್ಲಾ ಪವಿತ್ರರೇ? ಪರಮಾತ್ಮನಿಗೆ ಜಾತಿ ಸೂಚಕವೇ? ಎಂದು ಸಂಪ್ರದಾಯ ಬದ್ಧ ಸಮಾಜವನ್ನು ಪ್ರಶ್ನಿಸುತ್ತಾರೆ.

"ಪೂಜಿಪ ಕೈ ಎಲು ತೊವಲಿನ ದೊದ್ದೆ
ಜಪಿಸುವ ಜಿಹ್ವೆ ಜೊಲ್ಲಿನಳದ್ದ ರೊದ್ದೆ
ಧ್ಯಾನಿಪಮನಕಾ ಮಂಗನ ಶ್ರದ್ಧೆ
ಮಣಿಯುವ ಮೈ ನರಮಾಂಸದ ಮುದ್ದೆ ಮಣಿಸುವ..."[೨೬]

ಎಂದು ಹೇಳುವ ಶಾಸ್ತ್ರಿಯವರು ಜಾತಿ ನೀತಿಗಳನ್ನು ಮೀರಿ ನಿಂತ ಸಾಧಕರೆನ್ನಬಹುದು ಹೀನ ಕುಲದವರ ಅಣಕವಾಡುವ ಉಚ್ಚಕುಲದವರ ವಾದವನ್ನು ಖಂಡಿಸುತ್ತಾ 'ಎರಡಿಲ್ಲ' ಕವನದಲ್ಲಿ ಕವಿ ಈ ಸೃಷ್ಟಿಯಲ್ಲಿ ಯಾವುದೂ ಮೇಲಲ್ಲ, ಯಾವುದೂ ಕೀಳಲ್ಲವೆಂದು ಸಾರಿದ್ದಾರೆ. ಶೀಲ ಸದ್ಗುಣವೆಲ್ಲ ಮೇಲಾದ ಕುಲಕ್ಕೆಂದು ಪಾಲು ಮಾಡಿಟ್ಟವರಾರೋ ಎಂದು ಪ್ರಶ್ನಿಸುತ್ತಾ ಭಿನ್ನಬೇದಗಳೆಲ್ಲವು ಗನ್ನಘಾತಕತನು ಎಂದಿದ್ದಾರೆ.

ಉಚ್ಚ ನೀಚವೆಂಬ ಮನಸ್ಸಿನ ಜಾತ್ಯಾಂಧಕಾರ ಹೊರೆ ಹರಿದು ನೋಡಲು ಎಲ್ಲಕ್ಕೂ, ಎಲ್ಲದಕ್ಕೂ ಕಾರಣವಾದ ಪರಾಶಕ್ತಿಯ ಇರವು ಗೋಚರಿಸಲು ಸಾಧ್ಯ ಹೀಗೆ ಈ ಸೃಷ್ಟಿಯಲ್ಲಿ ಎಲ್ಲವೂ, ಎಲ್ಲರೂ ಒಂದೇ ಆಗಿರಲು ಮನುಷ್ಯ ಪರಸ್ಪರ ಉಚ್ಚ-ನೀಚ ಎಂದು ಹಾರಾಡುವುದರಲ್ಲಿ ಅರ್ಥವೇ ಇಲ್ಲ ಎಂದಿದ್ದಾರೆ.

"ಅಲ್ಲಾ ಹರೀ ರಹಮಾನ ಶಂಕರಾ
ಎಲ್ಲಾ ಮಾತಿನ ಭೇದ
ಎಲ್ಲೂ ತುಂಬಿರುವನಂತ ಚೇತನದ
ನಾನಾ ರೂಪ ಪ್ರಭೋದ"[೨೭]

ಎಂದು ಆರಂಭವಾಗುವ 'ಎಲ್ಲಾ ಮಾತಿನ ಭೇದ' ಎಂಬ ಕವನ ಸರ್ವಸಾಮರಸ್ಯ ತತ್ವವನ್ನು ಸಾರುತ್ತವೆ. ರೂಪ ಹಲವಾರಿದ್ದರೂ ಭಗವಂತನೊಬ್ಬನೇ ಎಲ್ಲವೂ ತುಂಬಿರುವ ಚೇತನವೇ ಪರಮಾತ್ಮ ಎಂದು ಸಾರಿದ್ದಾರೆ.

ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ, ಯಹೂದ್ಯ ಎಲ್ಲ ಪಂಥಗಳೂ ಒಂದೇ ಸಾಗರದಿಂದೇಳುವ ಅಲೆಗಳೆನ್ನುತ್ತಾ, ಮೌನ, ಧ್ಯಾನ, ಜಪತಪ, ದಾನಾದಿ ಮೊದಲಾದ ಒಳ್ಳೆಯ ಕಾರ್ಯಗಳನ್ನು ಮಾಡಿ ಏಕಾಗ್ರತೆ ಸಾಧಿಸುವುದೇ ಮೋಕ್ಷಕ್ಕೆ ದಾರಿ ಎಂದಿದ್ದಾರೆ.

ಬದುಕಿನಲ್ಲಿ ಹಲವಾರು ದಾರಿಗಳಿದ್ದರೂ, ವಿವಿಧ ಆಚರಣೆಗಳಿದ್ದರೂ ಗುರಿಯೊಂದೇ ಇರಬೇಕು ಆ ಗುರಿಸಾಧನೆಯತ್ತ ನಿರಂತರ ಸಾಗಬೇಕು.

"ವೀಣೆ ನುಡಿವ ಹಲವಾರು ಸ್ಥಾಯಿಗಳು
ಹಿಡಿದ ಶೃತಿಯೊಂದೇ
ಅಣಿಮುತ್ತುಗಳ ಹಾರ ಪೋಣಿಸಿದ
ದಾರ ತಾನದೊಂದೇ"[೨೪]

ವೀಣೆಗೆ ಹಲವಾರು ಸ್ಥಾಯಿಗಳಿದ್ದರೂ ಶೃತಿಯೊಂದೇ ಮಿಡಿಯುವಂತೆ, ಮುತ್ತುಗಳನ್ನು ಪೋಣಿಸಿದ ದಾರ ಒಂದೇ ಆಗಿರುವಂತೆ ಈ ಪ್ರಪಂಚದಲ್ಲಿ ಹಲವು ಧರ್ಮದ ಜನರಿದ್ದರೂ ಭಗವಂತನೊಬ್ಬನೇ ಹಾಗಾಗಿ ಎಲ್ಲವೂ ಮಾತಿನ ಭೇದವಷ್ಟೇ ಒಂದಾಗಿ ಬಾಳುವುದೇ ಮನುಜಧರ್ಮ ಎಂದು ಈ ಕವನ ಸರ್ವಧರ್ಮ ಸಮನ್ವಯತೆಯನ್ನು ಸಾಧಿಸುತ್ತದೆ.

ಲಕ್ಷ್ಮೀಶನ ಬಗ್ಗೆ ಅತೀವ ಗೌರವವಿರಿಸಿಕೊಂಡಿದ್ದ ಶಾಸ್ತ್ರಿಗಳು ವರಕವಿ ಎಂದು ಸಂಬೋಧಿಸಿ ಕವನವಾಗಿಸಿದ್ದಾರೆ, ಅವರ ಜೈಮಿನಿಭಾರತದ ವೈಭವವನ್ನು ಹಾಡಿಹೊಗಳಿದ್ದಾರೆ.

ಧರ್ಮರಾಯನ ಅಶ್ವಮೇಧವನ್ನು ಧರೆಗೆ ಸಾರಿದ ಕವಿಯನ್ನು ವಿಶ್ವವಂಧಿತ ವರಸುಲಕ್ಷ್ಮಿ, ಶಾಖ್ಯಿ, ಬುಧಮುಖ್ಯಿ ಎಂದು ಬಣ್ಣಿಸಿದ್ದಾರೆ. ನಿನ್ನ ವರ್ಣನಾ ನೈಪುಣ್ಯವ ತಿಳಿಯದೆ ಕಣ್ಣರಳಿಸಿ ಆಶ್ಚರ್ಯ ಪಡುವ ಕುನ್ನಿಗಳು ತಾವೆಂದು ಕವಿ ಸುಮನಿಕರ ಮಕರಂದವೆಂಬುದಾಗಿ ಬಣ್ಣಿಸಿದ್ದಾರೆ.

"ಸತತ ಸುಗಮೋಪಮ ಸುಚೇತನ
ಗತಿಗಮಕ ಗಾಯನದ ಗೌರವ ವಿಷಯ ವಿನ್ಯಾಸ
ಮತಿಯ ಮುಟ್ಟುವ ಮೃಧುಮೃಧುರತರ
ಹಿತಮಿತದ ಸುಕಥಾನುಲಾಪನ
ಚತುರನಹೆ ಸುಕವೀಂದ್ರ ತಾರಾವೃಂದ ಚಂದ್ರಮನೆ"[೨೫]

ಹಲವು ಉಪಮೆಗಳನ್ನು ಬಳಸಿ ಕೃತಿಗೆ ಚೈತನ್ಯ ನೀಡಿ ಗಮಕಗಳಿಗೆ ಗಾಯನದ ರಸದಿಂಪು ನೀಡಿದ ಮೃದುಮಧುರತರ ಭಾವದ ಹಿತಮಿತವಾಗಿ ಸುಕಥಾನುಲಾಪನ ಗೈದ ಚತುರ ಕವಿ ಲಕ್ಷ್ಮೀಶನನ್ನು ಸುಕವೀಂದ್ರ ತಾರಾವೃಂದ ಚಂದ್ರಮನೆಂದಿದ್ದಾರೆ.

ವೀರ, ಕರುಣಾ, ಶೃಂಗಾರ, ರಸವು ಮೆರೆದಿರುವ ನವರಸಪ್ರಧಾನ ಲಕ್ಷ್ಮೀಶನ ಕಾವ್ಯ ವರ್ಣನಾತೀತವೆಂಬುದಾಗಿ ಗೌರವಪೂರ್ಣ ಪ್ರಶಂಸೆ ಸಲ್ಲಿಸಿದ್ದಾರೆ.

ಬೇವುಬೆಲ್ಲ, ಸಿಹಿಕಹಿ, ನೀಡವಂತೆ ಕಷ್ಟಸುಖಗಳೆರಡೂ ಬಾಳಿನಲ್ಲಿ ತುಂಬಿ ದುಷ್ಟಭಾವಗಳು ದೂರವಾಗಬೇಕೆಂದು 'ಬೇವು ಬೆಲ್ಲ' ಕವನದ ಆಶಯವಾಗಿದೆ.

"ಉಪ್ಪನೇ ಸವಿದವನು ಸಕ್ಕರೆಯನೇಂಬಲ್ಲ 'ಬೆಪ್ಪ' ನವ ಸಕ್ಕರೆಯನುಪ್ಪಂಬವನು" ಎಂದು ಸಾರುವ ಶಾಸ್ತ್ರಿಗಳು ಜಗತ್ತನ್ನು ತೆರೆದಿಡುವ ಜೊತೆಗೆ ಪುಸ್ತಕವನ್ನು ತೆರೆದಿಡುತ್ತಾ ಹೊರಡುತ್ತಾರೆ.

"ಆದಿಕಾಲದಿಂದಾದಿಮೂಲದಿಂದಾದಿ ಅಂತ್ಯವಿದು ತೆರೆದಿದೆ
ಆದಿ ಶೋಧವಿದು ತೆರೆದಿದೆ ಅನಾದಿಭೋದವಿದು ತೆರೆದಿದೆ
ಸಂಧಿ ಸಂಧಿಗಳ ಸಂದಿದೆ
ಪರ್ವಪರ್ವಗಳ ಪೊಂದಿದೆ.
ಖಂಡ ಖಂಡಗಳ ಕಾಂಡಕಾಂಡಗಳ ಖಂಡಕಾವ್ಯವಿದು ತೆರೆದಿದೆ"[೩೦]

'ತೆರೆದಿದೆ ಬುಕ್ಕು' ಕವನದಲ್ಲಿ ಸೃಷ್ಟಿಯ ನಿರಂತರ ಲೀಲಾ ವಿನೋದವನ್ನು ತೆರೆದಿಡುತ್ತಾರೆ. ಸಂಧಿ ಸಂಧಿಗಳ ತೆರೆದು, ಪರ್ವ ಪರ್ವಗಳ ಬಿಚ್ಚಿ, ಖಂಡ, ಖಂಡಗಳತ್ತ ಚಾಚಿ ಜಗತ್ತು ತನ್ನ ಪುಟ ತೆರೆದಿದೆ. ಮಾಂಸ ಖಂಡಗಳ ಚಾಚಿ ಜಗತ್ತು ತನ್ನ ಪುಟ ತೆರೆದಿದೆ. ಮಾಂಸಖಂಡಗಳ ಈ ದೇಹ ರಾಗ ದ್ವೇಷಗಳ ಆಗರವಾಗಿದೆ. ಮಾನವನ ದೌರ್ಜನ್ಯಕ್ಕೆ ಸಿಕ್ಕ ಭೂಮಿತಾಯಿ ಕ್ಷಮಯಾಧರಿತ್ರಿಯಾಗಿ ಎಲ್ಲವನ್ನು ಕ್ಷಮಿಸುವಂತಹ ಸುಗುಣದಾಯಿ.

ಈ ಸೃಷ್ಟಿ ಮಾನವ ಬದುಕಿಗೆ ಪೂರಕವೂ ಹೌದು, ಮಾರಕವೂ ಹೌದು, ದಾನಿ ವೃದ್ಧಿಗಳೆರಡನ್ನು ಹೊಂದಿದ್ದರೂ ಶಾಂತರೂಪಿಯಾಗಿ ತನ್ನ ಸೃಷ್ಟಿ, ಸ್ಥಿತಿ, ಲಯವನ್ನು ತೆರೆದಿದೆ ಪ್ರಕೃತಿ.

ಕೊಳೆಯ ಕೂಪದಲಿ ಹುಟ್ಟಿದರೂ, ಅದಕ್ಕಂಟದೆ ಅರಳಿ, ನಳನಳಿಸುತ್ತಿರುವ ನಳಿಸಿ ನಾಗಾಲೋಟದಿಂದ ಓಡುವ ಹರಿಣಿ, ಕಣ್ಮನ ತಣಿಸುವ ಕಾಮಧೇನು, ಎಲ್ಲೆಲ್ಲೂ ಆವರಿಸಿ ನಿಂತಿರುವ ಭಾನು, ಅಮೃತ ತುಂಬಿದಂತಿರುವ ಚಂದ್ರಬಿಂಬ ಅಂಧಕಾರದಲ್ಲಿ ಮುಳುಗಿದ ಜಗಕೆ ಬೆಳಕು ತೋರಲು ಬಂದ ಕವಿ, ಹರಿಯುತ್ತಿರುವ ನೀರಿನ ಝರಿ "ಒಂದೊಂದ ನೋಡೆ ಬಂಧುರದ ಸುಪ್ರಬಂಧ" ಎಂದು ಉದ್ಗರಿಸುತ್ತದೆ ಕವಿ ಮನ.

"ಎನಿತೆನಿತೊ ತತ್ವ ಜೀವನದ ಸತ್ವ
ಬಾಳುವೆಯ ಸಾರ್ಥಕತ್ವ
ಎನಿತೆನಿತೋ ರೀತಿ ಎನಿತೆನಿತೋ ನೀತಿ
ಮೊಳಗಿಹುದು ಘನಸಂಸ್ಕೃತಿ"[೩೧]

ಜೀವನವು ಸತ್ವ ಪೂರಿತವಾಗಿದ್ದು, ಬಾಳು ಸಾರ್ಥಕತೆಯಿಂದ ಕೂಡಿ, ಸಂಸ್ಕೃತಿ ಘನವಾಗಿ ಮೆರೆಯಬೇಕೆಂಬ ಕವಿಯ ಆಶಯವನ್ನು ಇಲ್ಲಿ ಕಾಣಬಹುದು.

ಇವರ ಕವನಗಳಲ್ಲಿನ ಒಳನೋಟ, ಒಳತುಡಿತ, ಸರಳ ಹಾಗೂ ನುಡಿಕಟ್ಟು ಬಳಕೆ, ಆಧ್ಯಾತ್ಮದ ಸುಳುಹು ಹೊಳಪುಗಳು, ಶ್ರೀ ಶಾಸ್ತ್ರಿಗಳ ಜ್ಞಾನ ಅನುಭವ ಅನುಭಾವ ಸಿದ್ಧಿಗಳಿಂದ ಹೊರಹೊಮ್ಮಿದ ಭಾವಗಳೆನ್ನಬಹುದು.

## ಅಡಿಟಿಪ್ಪಣಿ

೦೧. ತುಂಬಿ (ಕವನ ಸಂಗ್ರಹ) ಲೇ.ಬೆಳಗೆರೆ ಕೃಷ್ಣಶಾಸ್ತ್ರಿ, ಪುಟ- ೧
೦೨. ಅದೇ, ಪುಟ- ೧
೦೩. ಅದೇ, ಪುಟ- ೨
೦೪. ಅದೇ, ಪುಟ- ೩
೦೫. ಅದೇ, ಪುಟ- ೪
೦೬. ಅದೇ, ಪುಟ- ೫
೦೭. ಅದೇ, ಪುಟ- ೫
೦೮. ಅದೇ, ಪುಟ- ೫
೦೯. ಅದೇ, ಪುಟ- ೬
೧೦. ಅದೇ, ಪುಟ- ೮
೧೧. ಅದೇ, ಪುಟ- ೯
೧೨. ಅದೇ, ಪುಟ- ೧೩
೧೩. ಅದೇ, ಪುಟ- ೧೦
೧೪. ಅದೇ, ಪುಟ- ೧೧
೧೫. ಅದೇ, ಪುಟ- ೧೫
೧೬. ಅದೇ, ಪುಟ- ೧೬
೧೭. ಅದೇ, ಪುಟ- ೨೧
೧೮. ಅದೇ, ಪುಟ- ೨೧
೧೯. ಅದೇ, ಪುಟ- ೨೨
೨೦. ಅದೇ, ಪುಟ- ೨೫
೨೧. ಅದೇ, ಪುಟ- ೨೫
೨೨. ಅದೇ, ಪುಟ- ೨೩
೨೩. ಅದೇ, ಪುಟ- ೨೩
೨೪. ಅದೇ, ಪುಟ- ೨೪
೨೫. ಅದೇ, ಪುಟ- ೨೯
೨೬. ಅದೇ, ಪುಟ- ೨೯
೨೭. ಅದೇ, ಪುಟ- ೧೭
೨೮. ಅದೇ, ಪುಟ- ೧೭
೨೯. ಅದೇ, ಪುಟ- ೩೩
೩೦. ಅದೇ, ಪುಟ- ೩೫
೩೧. ಅದೇ, ಪುಟ- ೩೬

## ೩.೨. ಯೋಗ್ದಾಗೆಲ್ಲಾ ಐತೆ

ಸಾಮಾನ್ಯವಾಗಿ ನಾನಾ ವೇಷಗಳ ಮೂಲಕ ಸುಳ್ಳು ಪವಾಡಗಳನ್ನು ಮಾಡುತ್ತಾ ಗಾಳಿಯಲ್ಲಿ ವಸ್ತುಗಳನ್ನು ಸೃಷ್ಟಿಸಿ ಮುಗ್ಧ ಮಾನವರನ್ನು ದಾರ ತಪ್ಪಿಸುವ, ತಾವೇ ದೇವರೆಂದು ಮೆರೆಯುವ ವ್ಯಕ್ತಿಗಳನೇಕರು ಈ ಪ್ರಪಂಚದಲ್ಲಿದ್ದಾರೆ. ಇಂಥವರ ಮಧ್ಯೆ ಯೋಗ ಸಾಧನೆಯಿಂದ ಅದಮ್ಯ ಸಿದ್ಧಿಯನ್ನು ಮೈಗೂಡಿಸಿಕೊಂಡು ಕಷ್ಟ ಕಾರ್ಪಣ್ಯದಲ್ಲಿ ನರಳುತ್ತಿರುವವರನ್ನು ಯಾವುದೇ ಫಲಾಪೇಕ್ಷೆ ಇಲ್ಲದೆ ರಕ್ಷಿಸುತ್ತಾ, ಆಡಂಬರದ ಯಾವುದೇ ಕಟ್ಟು ಪಾಡುಗಳಿಗೆ ಕಟಾಚಾರದ ಸಿದ್ಧಾಂತಗಳಿಗೆ ಒಳಗಾಗದೆ ಆಧ್ಯಾತ್ಮ ಸಾಧಕರಾಗಿ ಲೋಕೋದ್ಧಾರ ಮಾಡುತ್ತಿದ್ದ ಶ್ರೀಮುಕುಂದೂರು ಸ್ವಾಮಿಗಳಂಥವರೂ ಇದ್ದಾರೆ. ಇವರ ಅಪೂರ್ವ ವ್ಯಕ್ತಿತ್ವದ ಅನಾವರಣವೇ ಈ ಕೃತಿಯ ಆಶಯವಾಗಿದೆ.

ಸಾಮಾನ್ಯವಾಗಿ ಸ್ವಾಮೀಜಿಗಳೆಂದೊಡನೆ ನಮ್ಮ ಮುಂದೆ ಬರುವಂತಹ ದೃಶ್ಯ ಖಾವಿಧಾರಿಯಾಗಿ, ಭಂಗಿ ಸೇದುತ್ತಾ, ತಾನೇ ದೇವರೆಂದು ಪಾದ ಪೂಜೆ ಮಾಡಿಸಿಕೊಳ್ಳುವವರು ತಮ್ಮ ಮೋಸದ ಬಲೆಗೆ ಹಾಕಿ ಹಗಲು ದರೋಡೆಗೈಯ್ಯುವ ಹುನ್ನಾರ ಇವರಿಗೆ ಚೆನ್ನಾಗಿ ಕರಗತವಾಗಿರುತ್ತದೆ. ಹಿಪ್ನೋಟಿಸಂನ್ನೇ ಬಂಡವಾಳವಾಗಿರಿಸಿಕೊಂಡು ಗಾಳಿಯಲ್ಲಿ ವಸ್ತುಗಳನ್ನು ಸೃಷ್ಟಿಸುತ್ತಾ ಛಾಯಾ ಚಿತ್ರಗಳಲ್ಲಿ ಅರಿಶಿನ, ಕುಂಕುಮ, ಜೇನುತುಪ್ಪ ಭರಿಸುವಂತಹ ಇವರ ನಿಜಸ್ವರೂಪ ಬಯಲಾಗುವುದಕ್ಕೆ ಹೆಚ್ಚು ಸಮಯ ಹಿಡಿಯಲಾರದು.

ಆದರೆ, ಒಬ್ಬ ಸಾಮಾನ್ಯನಂತೆ ಕಾಣಿಸಿಕೊಂಡು ಸರಳ ಜೀವನ ನಡೆಸಿ, ಆಧ್ಯಾತ್ಮದ ಸಾರವನ್ನು ನಾಲಿಗೆಯ ತುದಿಯಲ್ಲೇ ಗುಣುಗುಣಿಸುತ್ತಾ, ತಮ್ಮ ಎಲ್ಲಾ ಪವಾಡಗಳಿಗೆ ಯೋಗಶಕ್ತಿಯೇ ಕಾರಣ ಎಂದು ಸಾರುವ ಮುಕುಂದೂರು ಸ್ವಾಮಿಗಳ ಮಹಾಸಾಧನೆಯೇ ಸರಿ. ಸಾಧನೆಗೆ ನಿಲುಕದ್ದು ಯಾವುದೂ ಇಲ್ಲ ಎನ್ನುವಂತೆ ಯೋಗಶಕ್ತಿಯ ಸಾಧನೆಯಲ್ಲಿ ಅಪೂರ್ವ ಸಾಧನೆಗೈದವರು.

ಸ್ವಾಮಿಗಳ ಬಗ್ಗೆ ಅಭಿಮಾನದಿಂದ, ಭಕ್ತಿಗೌರವದಿಂದ ಇಡೀ ಕೃತಿಯನ್ನೇ ಅವರ ಕುರಿತಾಗಿ ರಚಿಸಿರುವ ಶ್ರೀ ಬೆಳೆಗೆರೆ ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೇಳುವುದಾದರೆ "ಇದು ವಿಜ್ಞಾನಯುಗ ಕಣ್ಣಲ್ಲಿ ಕಂಡದ್ದನ್ನು ಮಾತ್ರ ಒಪ್ಪುವ ಕಾಲ ಆದರೆ ವಿಜ್ಞಾನದ ಕಣ್ಣಿಗೆ ಕಾಣದೇ ಉಳಿದಿರುವ ವಿಜ್ಞಾನವು ಇನ್ನೂ ಅನ್ವೇಷಿಸಬೇಕಾದ ಸತ್ಯವು ಬೃಹತ್ತಾಗಿ ಉಳಿದೇ ಇದ್ದು, ಈಗ ಲಭ್ಯವಾಗಿರುವುದು ಕೇವಲ ಕವಡೆಯಷ್ಟು ಮಾತ್ರ"[೧] ಎಂಬ ಮಾತನ್ನು ಎಂತಹವರೂ ಒಪ್ಪಲೇ ಬೇಕಾಗುತ್ತದೆ.

ಈ ಭೌತಿಕ ಜಗತ್ತಿನ ಆಚೆಗೆ ಇರುವ ಚಾಲಕ ಚೇತನವನ್ನು ಸಾಧಿಸಿ ಸಾರಿದ ಕಾಲವೊಂದು ಭರತಖಂಡದ ಹಿರಿಮೆಯಾಗಿತ್ತು ಆದರೆ, ಸಹಸ್ರಾರು ವರ್ಷಗಳ ಪರಕೀಯರ ಆಳ್ವಿಕೆಗೆ ಸಿಕ್ಕಿ, ಅವರ ರೀತಿ ರಿವಾಜುಗಳನ್ನು ಪಾಲಿಸುತ್ತಾ, ಅವರ ಮೆಚ್ಚುಗೆಗಾಗಿ ನಮ್ಮ ಜೀವನ ಪಥ ನಡೆಸಿದ ನಾವು ನಮ್ಮ ಅಮೂಲ್ಯವಾದ ವಿದ್ಯೆಯನ್ನು ಸಾಧನೆ ಸಿದ್ಧಿಗಳನ್ನು ಮರೆತಿದ್ದೇವೆ. ಮರೆತು ಅದೆಲ್ಲವೂ ಸುಳ್ಳು ಎಂಬ ಮಟ್ಟಿಗೂ ಇಳಿದಿರುವುದು ಒಂದು ದುರುಂತವೇ ಸರಿ. ಕನಿಷ್ಟ ಮಾನವೀಯ ಮೌಲ್ಯಗಳು ಧೂಳೆದ್ದು

ಹೋಗಿ ಎಲ್ಲೆಲ್ಲೂ ಹಾಹಾಕಾರದ ನಗ್ನ ತಾಂಡವಕ್ಕೆ ಎಡೆಮಾಡಿದೆ. ಇಂತಹ ಸನ್ನಿವೇಶದಲ್ಲೂ ಶ್ರೀಮುಕುಂದೂರು ಸ್ವಾಮಿಗಳಂಥ ಸಿದ್ಧಪುರುಷರು ನಮ್ಮ ನಡುವೆ ಆಗಾಗ ಅಲ್ಲಲ್ಲಿ ಕಾಣಸಿಗುವುದು ಈ ನಾಡಿನ ಸೌಭಾಗ್ಯ[೧] ಎನ್ನುವ ಶಾಸ್ತ್ರಿಗಳ ಮಾತು ಅತಿಶಯೋಕ್ತಿಯೆಸಲಾರದು.

ಯಾಕೆಂದರೆ ವ್ಯಕ್ತಿ ಸ್ತುತಿ ಶಾಸ್ತ್ರಿಯವರ ಜಾಯಮಾನವಲ್ಲ, ಸರಳ ಸಾದಾ ವ್ಯಕ್ತಿತ್ವಕ್ಕೆ ಮತ್ತೊಂದು ಹೆಸರು ಬೆಳಗೆರೆ ಕೃಷ್ಣಶಾಸ್ತ್ರೀ ಸದಾ ತನ್ನ ಸುತ್ತಲಿನ ಪರಿಸರದ ಬಗ್ಗೆ ಅತೀವ ಕಾಳಜಿಯನ್ನು ವಹಿಸುವ ಕೃಷ್ಣಶಾಸ್ತ್ರಿಗಳು ಬರೆದದ್ದು ಇರಬೇಕಾದ ಆದರ್ಶದ ಬದುಕನ್ನಲ್ಲ ತಮ್ಮ ಜೀವನದ ಕೆಲವು ಘಟನೆಗಳನ್ನು ಮಾತ್ರ ಹೀಗಿರಲು ಶಾಸ್ತ್ರಿಯವರನ್ನು ಅತಿಯಾಗಿ ಸೆಳೆದ ಸ್ವಾಮಿಗಳ ವ್ಯಕ್ತಿತ್ವ ಹಾಗೂ ಅವರೊಡನೆ ಕಳೆದ ಆ ಆಧ್ಯಾತ್ಮ ರಸಾನುಭವವೇ ಪ್ರಸ್ತುತ ಯೇಗ್ದಾಗೆಲ್ಲಾ ಐತೆ ಕೃತಿಯ ಸಾರ.

ಯೇಗ್ದಾಗೆಲ್ಲಾ ಐತೆ ಶೀರ್ಷಿಕೆ ಮೇಲ್ನೋಟಕ್ಕೆ ಅರ್ಥಸಂದಿಗ್ಧತೆಗೆ ಎಡೆಮಾಡಿ ಕೊಡಬಹುದು. ಆದರೆ ಇದರ ಅರ್ಥ "ಯೋಗದಲ್ಲಿ ಎಲ್ಲವೂ ಇದೆ"[೨] ಎಂಬುದಾಗಿದೆ. ಸ್ವಾಮಿಯವರು ತನ್ನ ಬದುಕಿನ ಎಲ್ಲಾ ರೀತಿ ನೀತಿಗಳಿಗೂ ಕಾರಣ ಯೋಗವೆಂದು ಹೇಳುತ್ತಾ, ಯೇಗ್ದಾಗೆಲ್ಲಾ ಐತೆ ಎಂದು ಎಲ್ಲರ ಬಾಯ್ಮುಚ್ಚಿಸುತ್ತಿದ್ದರು. ಹಾಗಾಗಿ ಈ ಕೃತಿಗೆ ಅವರ ಮಾತನ್ನೇ ಶಿರೋನಾಮೆಯಾಗಿಸಿದ್ದಾರೆ. ಸ್ವಾಮಿಯವರ ಪ್ರಕಾರ ಕಣ್ಣು ನೋಡುವಂತೆ, ಕಿವಿ ಕೇಳುವಂತೆ, ಒಂದು ಮರ ಹೂವು ಹಣ್ಣು ಬಿಡುವಂತೆ, ಚಂದ್ರನ ಬೆಳಕು, ಸೂರ್ಯನ ಬೆಳಕು ಸಹಜವಿರುವಂತೆ ಯೋಗ್ಯವೂ ಸಹ ತನ್ನ ಕೆಲಸವನ್ನು ಅಷ್ಟೇ ಸಹಜವಾಗಿ ನಡೆಸಿಬಿಡುತ್ತದೆ.

ಸ್ವಾಮಿಯವರ ಲೋಕಾನುಭವ, ಆಧ್ಯಾತ್ಮಿಕ ಸೃಷ್ಟಿ ಅವರದೇ ರೀತಿಯ ವಿಚಾರ, ನಿರೂಪಣಾ ವಿಧಾನ, ಸದಾ ನಕ್ಕುನಗಿಸುವ ಸಹಜ ಆನಂದ, ಎಲ್ಲದರಲ್ಲೂ ಅವರದು ವಿಚಿತ್ರರೀತಿ, ಯಾವುದೇ ಜಾತಿ, ಮತ, ಮೇಲು, ಕೀಳುಗಳನ್ನು ಮೀರಿನಿಂತ ಅವರೊಂದಿಗೆ ಉಂಟಾದ ದೀರ್ಘ ಸಂಪರ್ಕದಿಂದ ಅವರನ್ನು ಸ್ವಲ್ಪ ಮಟ್ಟಿಗಾದರೂ ಅರಿಯಲು ಸಾಧ್ಯವಾದುದು. ತನ್ನ ಭಾಗ್ಯವೆಂದು[೩] ಶಾಸ್ತ್ರಿಗಳ ಅಭಿಪ್ರಾಯ.

ಈ ಕೃತಿಯ ಕುರಿತು ಅನೇಕ ವಿದ್ವಾಂಸರು ಹಲವಾರು ರೀತಿಯ ಅಭಿಪ್ರಾಯವನ್ನು ಕೊಟ್ಟಿದ್ದಾರೆ. ಖ್ಯಾತ ವಿಮರ್ಶಕರಾದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್‌ರವರ ಮಾತುಗಳನ್ನು ಇಲ್ಲಿ ಪ್ರಸ್ತಾಪಿಸುವುದಾದರೆ. "ಶ್ರೀ ಮುಕುಂದೂರು ಸ್ವಾಮಿಗಳು ಕುರಿತ ಈ ಪುಸ್ತಕ ಯೋಗದಲ್ಲೇ ಎಲ್ಲಾ ಇದೆ. ಎಂಬ ವಿಚಾರವನ್ನು ಹೇಳುತ್ತದೆ. ಯೋಗ ಎಂದರೆ ಸಂಬಂಧ, ಸಮಾಜಕ್ಕೂ ವ್ಯಕ್ತಿಗೂ ಇರುವ ಸಂಬಂಧ, ಮಾನವನಿಗೂ ಪಂಚಭೂತಗಳಿಗೂ ಇರುವ ಸಂಬಂಧ. ಪ್ರಸ್ತುತ ಶ್ರೀಯುತ ಶಾಸ್ತ್ರಿಯವರ ಹಾಗೂ ಮುಕುಂದೂರು ಸ್ವಾಮಿಗಳ ಸಂಬಂಧವೇ ಈ ಯೋಗ. ಶಾಸ್ತ್ರೀ ಮೇಷ್ಟು ಮತ್ತು ಮುಕುಂದೂರು ಸ್ವಾಮಿಗಳ ಯೋಗ ತುಂಬಾ ದೊಡ್ಡದು. ಆ ಯೋಗದ ಒಂದು ಅವತರಣ ಈ ಕೃತಿಯ ಅಂತಃಸತ್ವವನ್ನು ಕುರಿತದ್ದಾಗಿದೆ."[೪] ಹೀಗೆ ಶಾಸ್ತ್ರಿಗಳು ಹಾಗೂ ಸ್ವಾಮಿಗಳ ಸಂಬಂಧವನ್ನು ಯೋಗದೊಂದಿಗೆ ಸಮೀಕರಿಸಿ ಹೇಳಿದ್ದಾರೆ.

ಯಾವ ಮಹನೀಯ ಗುರುಗಳ ಸೇವೆ ಮಾಡಿ ಸಿದ್ಧಿಯನ್ನು ಪಡೆದರೋ ಯಾರಿಗೂ ತಿಳಿಯದು ಕೇಳಿದರೆ ಪೂರ್ವಾಶ್ರಮದ ವಾಸನೆಯು ಗೊತ್ತಾಗದಂಥ ಮಾತುಗಳೇ ಉತ್ತರಗಳು ವಯಸ್ಸು ಯಾವಾಗ, ಎಷ್ಟು ಎಂಬುದು ಖಚಿತವಿಲ್ಲ. ಸುಮಾರು ೧೯೫೨ರಲ್ಲಿ ಎಂಬತ್ತು ವರ್ಷ ವಯಸ್ಸು ದಾಟಿದವರೂ ಈ ಸ್ವಾಮಿಗಳು ನನ್ನ ಮದುವೆಗೆ ಬಂದಿದ್ದರು ಎಂದು ಹೇಳಿರುವುದುಂಟು ಬೆಂಗಳೂರು ಹರಿಹರ ರೈಲುಮಾರ್ಗ ಪ್ರಾರಂಭವಾದಾಗ ಅಲ್ಲಿ ಇವರು ಮಣ್ಣು ಹೊತ್ತಿದ್ದು ಉಂಟು. ಪೆಟ್ಟು ಬಿದ್ದಾಗ ವಯಸ್ಸೆಷ್ಟು ಎಂದು ಕೇಳಿದರೆ "ಈ ಬೆಟ್ಟಗುಡ್ಡಕ್ಕೆ ಎಷ್ಟಾಗಿದೆ ಕೇಳಿಕೊಂಡು ಬಾ" ಎಂದು ಹೇಳುವ ಉತ್ತರ ಬಳಕೆ ಇದ್ದವರ ಅಂದಾಜಿನಲ್ಲಿ ಸ್ವಾಮಿಗಳಿಗೆ ನೂರ ನಲ್ವತ್ತರ ಅಂದಾಜು. ಈ ವಯಸ್ಸಿನಲ್ಲಿಯೂ ಸ್ವಚ್ಛಂದವಾಗಿ ನಡೆದಾಡುವ ಕುಣಿದು ಕುಪ್ಪಳಿಸುವ ಶರೀರ ಸ್ವಾಸ್ತ್ಯ ಮತ್ತು ಯುವ ಮನೋಧರ್ಮ ಹೊಂದಿರುವ ಸ್ವಾಮಿಗಳು ಭಕ್ತಿ, ಜ್ಞಾನ, ವೈರಾಗ್ಯ ಸಮ್ಮಿಳಿತ ಪರಿವ್ರಾಜಕ[೧] ಎನ್ನುವ ಶ್ರೀ.ಎಸ್.ಆರ್.ಕಾಳಿಂಗ ಕೃಷ್ಣ ಅವರ ಮಾತುಗಳು ಸಮರ್ಥನೀಯವಾಗಿದೆ.

ಸ್ವಾಮಿಗಳ ಮಾತುಗಳೇ ವೇದಾಂತ ಬದುಕಿನ ನಿತ್ಯಸತ್ಯವನ್ನು ಆಧ್ಯಾತ್ಮಸಾರದೊಂದಿಗೆ ಅರೆದು ಕುಡಿದವರು ಇವರಾಗಿದ್ದರು. ಅಂತೆಯೇ ಶಾಸ್ತ್ರಿಯವರು ಬದುಕನ್ನು ವೇದಾಂತದ ಒಗಟಿನೊಂದಿಗೆ ಸಮೀಕರಿಸಿ ಬಿಡಿಸುತ್ತಾರೆ. ಒಂದೇ ಇತ್ತು ಬಂಧು ಬಳಗ ಎಲ್ಲ ಸೇರಿ ಅದಕ್ಕೊಂದು ಜೊತೆ ಇರ್ಲಿ ಅಂತ ಕಟ್ಟಿದರು. ಲೋಕದಾಟ? ಎರಡಾಗಿದ್ದು ಮೂರಾಯ್ತು ಒಳ್ಳೇ ಖುಸಿಯಾಗೇ ಇತ್ತು ಇದಕ್ಕಿದ್ದಂಗೆ ಆಳೇ ಹದ್ದು ಬಂದು ಕೋಳಿ ಮರೀನ ಹೊತ್ಕೊಂಡು ಹೋದಂಗಾಯ್ತು ಪಾಪ ಕಾವು ಕೊಟ್ಟು ಗುಟುಕು ಕೊಟ್ಟು ಸಾಕಿತ್ತು. ತಾಯಿ ಯಾಟಿ ಗುಂಡಿಗೆ ಧಡಕ್ಕಂತು ಕಣ್‌ಮುಚ್ಚಿ ಆಗಿನ್ನೇನು ಮೊದಲೆ ಒಂದೇ ಒಂದು ಇದ್ದದ್ದು ಕಡೆಗೂ ಒಂದೇ ಉಳೀತು."[೨] ಎಂಬ ಸ್ವಾಮಿಗಳ ಪ್ರತಿಮಾತ್ಮಕ ಉತ್ತರದ ಮಾತುಗಳಲ್ಲಿ ಶಾಸ್ತ್ರಿಯವರ ಬದುಕಿನ ಚಿತ್ರಣವೇ ಅಡಗಿದೆ. ಅವರ ವಿವಾಹ, ದಾಂಪತ್ಯ ಜೀವನ, ಮಗನ ಮರಣ, ಪತ್ನಿಯ ಸಾವು ಕೊನೆಗೂ ಏಕಾಂತ ಬದುಕು ಹೀಗೆ ಅವರು ಪುಟ್ಟ ಉಪಮೆ, ಸರಳವಾದ ನಿದರ್ಶನ ಮತ್ತು ಸರಳವಾದ ಕಥಾನಕಗಳಿಂದ ಒಟ್ಟು ಜೀವನವನ್ನು ಚೈತನ್ಯ ಪೂರ್ಣವಾಗಿ ಕಟ್ಟಿಕೊಡುತ್ತಾರೆ.

ಶ್ರೀಯುತ ಸ್ವಾಮಿಗಳ ವ್ಯಕ್ತಿತ್ವದ ಇನ್ನೊಂದು ವಿಶೇಷತೆ ಇವರು ಯಾರನ್ನೂ ತಮ್ಮ ಅನುಯಾಯಿಗಳಾಗಿರೆಂದು, ಭಕ್ತರಾಗಿರೆಂದು ಹೇಳಿದವರಲ್ಲ. ಊರಿನ ಜನರೆಲ್ಲ ಮಾತಾಡ್ತಾ ಮಾತಾಡ್ತಾ ಊರಿಂದ ಹೊರ ನಡೆದಾಗ ಸ್ವಾಮಿಗಳು ತಮ್ಮ ಚಿತ್ರದಿಂದ ದಾರಿಗಡ್ಡವಾಗಿ ಗೆರೆ ಎಳೆದರು. "ಇಲ್ಲಿಂದ ಯಾರೂ ಮುಂದೆ ಬರಬೇಡಿ, ನೀವು ಸಂಸಾರವೊಂದಿಗರು ಸನ್ಯಾಸೇನ ಬಹಳ ಹಚ್ಕೋ ಬಾರ್ದು"[೩] ಎಂದು ಹೇಳುವ ಮೂಲಕ ಜನರಿಗೆ ಸಾಂಸಾರಿಕ ಜವಾಬ್ದಾರಿಯನ್ನು ಮೂಡಿಸುವ ಅಪೂರ್ವ ವ್ಯಕ್ತಿತ್ವ ಇವರದು.

ಪ್ರಕೃತಿಯ ನಿತ್ಯಸುಂದರ ಸೃಷ್ಟಿಗೆ ಬೆರಗಾಗುತ್ತಾ, ಸೃಷ್ಟಿಯ ಚೇತನಾ ಚೇತನ ವಸ್ತುಗಳನ್ನು ವ್ಯಕ್ತಿಗಳಾಗಿ ಸಂಬೋಧಿಸುವುದು ಇವರ ಸಾಮಾನ್ಯತೆಯಲ್ಲಿ ಅಸಾಮಾನ್ಯತೆಯನ್ನು ಗುರುತಿಸುವ

ಗುಣವಾಗಿದೆ. ಕ್ಷಣಕ್ಷಣಕ್ಕೂ ಪ್ರಕೃತಿಯಲ್ಲಾಗುವ ಬದಲಾವಣೆಗೆ ತಲೆದೂಗುತ್ತಾ ಪ್ರಕೃತಿಯೊಂದಿಗೆ ಮನುಷ್ಯನನ್ನು ತುಲನೆ ಮಾಡುತ್ತಾ ತನ್ನಿಂದಲೇ ಎಲ್ಲ ಎಂದು ಮೆರೆಯುವ ಮನುಷ್ಯನ ಅಹಂಕಾರವನ್ನು ಕಟಕಿಯಾಡುತ್ತಾರೆ.

ಸೃಷ್ಟಿ ರಹಸ್ಯವನ್ನು ಎಷ್ಟು ಸಹಜವಾಗಿ ಅಲ್ಲೇ ಸಿಕ್ಕಿದ ನೀರುಗುಳ್ಳೆಯನ್ನೇ ಉದಾಹರಿಸಿ ಎಷ್ಟೊಂದು ಸುಲಭವಾಗಿ ಕಣ್ಣಿಗೆ ಕಟ್ಟಿದಂತೆ ಬಿಚ್ಚಿಟ್ಟ ಅವರ ಮಾತುಗಾರಿಕೆಗೆ ತಲೆದೂಗಲೇಬೇಕು.

ಅನುಭಾವಿಗಳು ಭಗವಂತನಲ್ಲಿ ಸಲಿಗೆಯ ಭಕ್ತಿ ಪಾರಮ್ಯ ಹೊಂದಿದವರು ಈ ಸ್ವಾಮಿಗಳೂ ಅಷ್ಟೇ. ಆಂಜನೇಯ ವಿಗ್ರಹವನ್ನು ತೋರಿಸುತ್ತಾ ಸೊಟ್ಟಮೂತಿ ಹನುಮಪ್ಪ ಎಂದೂ, ಮೂಗು ಮೂತಿ ನೆಟ್ಟಗಿದ್ದಿದ್ರೆ ಏನೇನು ಮೆರೀತಿದ್ನೋ ಎಂದೂ ಕರೀಮುಕ್ದ ಸೊಟ್ಮೂತಿ ಚಲುವನೆಂದು ಹೇಳುವುದು ಭಗವಂತನ ಕುರಿತಾಗಿನ ಅತಿಸಲಿಗೆಯ ನಿಂದಾಸ್ತುತಿಯಾಗಿದೆ.[೯]

ಶಿವಲಿಂಗಕ್ಕೆ ಅಭಿಷೇಕ, ಪೂಜೆ ಇತ್ಯಾದಿಗಳನ್ನು ನೆರವೇರಿಸುವ ಮಾತುಗಳು ವಿಚಿತ್ರ. ಲಿಂಗವನ್ನು ಸಂಬೋಧಿಸಿ ಪಾಪ ನಿನಗೆ ಅಪ್ಪ ಇಲ್ಲ ಅಮ್ಮ ಇಲ್ಲ ಎಂಬ ವಾತ್ಸಲ್ಯದ ಪರಮಾವಧಿ, ಅಭಿಷೇಕ, ಅಲಂಕಾರ, ನೈವೇಧ್ಯ ಆದ ಮೇಲೆ ಎಲೆಲೆ ಪರವಿಲ್ಲಕಣೋ, ಅಲಂಕಾರ ಮಾಡಿದರೆ ಮೋಜಾಗಿ ಮಾಡಿಸ್ಕೊಂತೀಯಾ ಎನ್ನುವ ಸಖ್ಯಭಾವದ ಪರಾಕಾಷ್ಟತೆ.[೧೦]

ಸ್ವಾಮಿಗಳು ಪವಾಡ ಪುರುಷರೂ ಹೌದು. ಹಾಗಂತ ಯಾರನ್ನೋ ಮೆಚ್ಚಿಸುವಂತೆ ಮಾಡುವ ಪವಾಡಗಳು ಇವರದಲ್ಲ. ಪವಾಡಕ್ಕಾಗಿ ಪವಾಡಮಾಡುವ ಉದ್ದೇಶ ತಂತ್ರ ಇವರಿಗೆ ಇಲ್ಲ ಒಂಟಿ ಕದವಿರುವ ಕೋಣೆಯಲ್ಲಿ ಒಳಗಿನ ಅಗುಳಿಯನ್ನು ತೆರೆಯದೇ ಬೆರಳು ತೂರಿಸುವಷ್ಟು ಅವಕಾಶವಿಲ್ಲದ ಮುಚ್ಚಿದ ಬಾಗಿಲು ಮುಚ್ಚಿದಂತೆಯೇ ಸ್ವಾಮಿಗಳು ಕೋಣೆಯಿಂದ ಹೊರಟಿರುವುದು ಇವರ ಪವಾಡಕ್ಕೆ ಸಾಕ್ಷಿ.

ಒಂದು ರಾತ್ರಿ ಹೇಮಗಿರಿ ಬೆಟ್ಟದಲ್ಲಿ ಶಾಸ್ತ್ರಿಗಳು ಹಾಗೂ ಸ್ವಾಮಿಗಳು ತಂಗಿದ್ದು, ಮುಂಜಾವ ಬಸ್ಸು ಪ್ರಯಾಣ ಕೈಗೊಂಡಾಗ ದಾರಿಯಲ್ಲಿ ಹೆರಿಗೆ ಬೇನೆಯಲ್ಲಿ ನರಳುತ್ತಿದ್ದ ಮಹಿಳೆಯನ್ನು ಕಂಡದ್ದು, ಬಸ್ಸಿನವರು ಅವಳನ್ನು ಆಸ್ಪತ್ರೆಯವರೆಗೂ ತಲುಪಿಸಬಹುದೆಂದೂ, ಆಸ್ಪತ್ರೆಯ ಖರ್ಚನ್ನು ಭರಿಸಲಾಗದೆಂದೂ, ಈ ನಡುವೆ ಬಡವಿಯಾದ ಆಕೆಯ ಜವಾಬ್ದಾರಿಯನ್ನು ಬಸ್ಸಿನವರೇ ನೋಡಿಕೊಳ್ಳಬೇಕೆಂದು ನೆರೆದ ಹೆಂಗಸರ ನಡುವೆ ವಾದ-ವಿವಾದ ನಡೆಯುತ್ತಿದ್ದಾಗ, ಸ್ವಾಮಿಗಳು ಅಲ್ಲಿಯೇ ಇದ್ದ ಚಿಂದಿ ಕಾಗದವನ್ನು ತರಲು ಹೇಳಿ, ತಂದಾಗ ಆ ಕಾಗದ ನೂರರ ನೋಟಾಗಿ ಪರಿವರ್ತನೆಯಾದದ್ದು, ಆ ಮಹಿಳೆಯ ನೆರವಿಗೆ ಆ ನೋಟವನ್ನು ನೀಡಿದ್ದು ಇವು ಸ್ವಾಮಿಯವರ ಪವಾಡಕ್ಕೆ ಹಾಗೂ ಮಾನವೀಯತೆಗೆ ಸಾಕ್ಷಿಯಾಗಿದೆ.

ಸ್ವಾಮಿಗಳ ಮಾತುಗಳಿಗೆಲ್ಲಾ ಆಧ್ಯಾತ್ಮದ ಲೇಪವಿರುತ್ತಿತ್ತು. ಅವರ ಪ್ರಕಾರ ಮನುಷ್ಯನಲ್ಲೇ ಶಿವರುದ್ರ ಎರಡೂ ಗುಣಗಳು ತುಂಬಿವೆ. ಸಿಟ್‌ಬಂದ್ರೆ ರುದ್ರ. ತಣ್ಣಗಾದರೆ ಶಿವ, ಸ್ಮಶಾನ, ಸಮಾಧಿ

ಈ ಪದಗಳಿಗೆ ಆಧ್ಯಾತ್ಮದ ಅರ್ಥವನ್ನು ಕಲ್ಪಿಸುತ್ತಾ, ಇದ್ದಾಗಲೇ ಸಮಾಧಿಯಾಗ್ಬೇಕು ಅಂಗ್ ಸಮಾದಿಯಾದ್ರೆ ಅದೇ ಶಿವ ಶರೀರಾನೇ ಸ್ಮಶಾನ ಅಂತಸ್ಮಶಾನದಾಗೆ ಶಿವ ಐದಾನೆ[೧೨] ಎಂದು ಹೇಳಿದರು.

ತಮ್ಮ ಹೆಸರನ್ನೇ ಹಿಡಿದು ಆಧ್ಯಾತ್ಮವನ್ನು ಬೋಧಿಸುವ ರೀತಿ ವಿಚಿತ್ರವಾದುದು ಮುಕುಂದ ಅಂದರೆ ಮೂರು ಕುಂಡಗಳು, ಅಂದ್ರೆ ಮೂರು ಸ್ವಾರೆಗಳು, ಈ ಮೂರು ಸ್ವಾರೆಗಳು ಸೇರಿ ಕಣ್ಣು, ಕಿವಿ, ಮೂಗು, ಕೈಕಾಲು ಇರೋ ಊರು ಮುಕುಂದೂರು. ಒಂದು ಸ್ಥೂಲ, ಒಂದು ಸೂಕ್ಷ್ಮ, ಇನ್ನೊಂದು ಕಾರಣ, ಒಟ್ಟು ಮೂರು, ಈ ಮೂರರ ಒಳಗೆ ಯಾರಿಗೂ ಕಾಣ್ದೋನು ಇನ್ನೊಬ್ಬ ಐದಾನೆ ಅವನೇ ಸ್ವಾಮಿ. ಅಲ್ಲಿಗೆ ಮುಕುಂದೂರು ಸ್ವಾಮಿ ಆಯ್ತು, ಇದರಂತೆ ನೋಡಿದರೆ ಎಲ್ಲರೂ ಮುಕುಂದೂರು ಸ್ವಾಮಿಗಳೇ ಸ್ಥೂಲ ಶರೀರ ಎಂದರೆ ಕೈಕಾಲು, ಕಣ್ಣು, ಮೂಗು ಒಟ್ಟು ಹೊರಗಿನ ಅಂಗೇ ಸೂಕ್ಷ್ಮ ಶರೀರ ಎಂದರೆ ಈ ಸ್ಥೂಲ ಶರೀರದ ಒಳಗೆ ಇದ್ದು ಇದನ್ನು ಆಟ ಆಡಿಸೋ ಮನಸ್ಸು ಬುದ್ಧಿ."[೧೩]

ಹೀಗೆ ಹಳ್ಳಿಯ ಮುಗ್ಧರಿಗೆ ಅವರದೇ ವಸ್ತು ವಿಚಾರಗಳನ್ನು ಎತ್ತಿಕೊಂಡು ಅವರದೇ ಭಾಷೆಯಲ್ಲಿ ಅವರದೇ ರೀತಿಯಲ್ಲಿ ವಿಶಿಷ್ಟವಾಗಿ ತತ್ವಬೋಧನೆಯನ್ನು, ಕರ್ತವ್ಯ ಪ್ರಜ್ಞೆಯನ್ನು ಒಟ್ಟೊಟ್ಟಿಗೆ ಮೂಢಿಸುತ್ತಿದ್ದುದು ಇವರ ವೈಶಿಷ್ಟ್ಯವಾಗಿತ್ತು. ಆಧ್ಯಾತ್ಮವನ್ನು ನಿತ್ಯ ಜೀವನದಲ್ಲಿ ಸಾಧಿಸಬೇಕೆಂಬುದೇ ಇವರ ಮಾತಿನ ತಾತ್ಪರ್ಯ.

ಒಂದಕ್ಷರ ಕಲಿಯದ ಸ್ವಾಮಿಗಳ ವೈಚಾರಿಕ ಸಿದ್ಧಿಗಾಗಿ ಬೆರಗಾಗಲೇ ಬೇಕು. ಆಶ್ರಮಕ್ಕೆ ಬಂದ ಒಬ್ಬರು ಮಾತಿನ ಮಧ್ಯೆ, ಸ್ವಾಮಿ ದೊಡ್ಡಬೋರೇಗೌಡ ಸತ್ತೋದ ಎಂದರು. ಆಗ ಸ್ವಾಮಿಗಳು ನಗುತ್ತಾ, "ಸತ್ತು ಹೋಗೋದುಂಟೆ, ಅದು ಎಂದೆಂದಿಗೂ ಇರೋದು. ಯಂಗಪ್ಪ ಬಾಳಿ ಬದುಕಿ ಸತ್ತು ಹೋಗೋದು?"[೧೪] ಎಂದು ನಗುವ ಅವರನ್ನು ಕಂಡು ಸಾಮಾನ್ಯರು ತಬ್ಬಿಬ್ಬಾಗುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಹುಟ್ಟುಸಾವಿನ ಬಗೆಗಿನ ಸ್ವಾಮಿಗಳ ತತ್ತ್ವವಿಚಾರ ಪಂಡಿತರನ್ನು ತಬ್ಬಿಬ್ಬುಗೊಳಿಸುವಂತಾಗಿದೆ.

ಸ್ವಾಮಿಗಳು ತಾವೇ ಏಕಪಾತ್ರಾಭಿನಯ ಮಾಡುತ್ತಾ, ದುಶ್ಯಾಸನನ ಪಾತ್ರದಲ್ಲಿ ಜೂಜಿನಲ್ಲಿ ಗೆದ್ದ ದ್ರೌಪದಿಯನ್ನು ನಿರ್ವಾಣ ಮಾಡಲು ಬಂದಿರುವುದೆಂದು ಹೇಳುತ್ತಾ, "ಮತ್ತೊಂದು ಕಡೆಯೂ ಸಾರಥಿಯಾಗಿ ನಿರ್ವಾಣ ಆದರೇನೇ ಸರಿ. ಪಂಚಪಾಂಡವರು ಸೋತ ಮೇಲೆ ಆದ್ರೌಪದಿ ಅನ್ನೋ ಗ್ನಾನಾಂಬಿಕೆ ಆಗೋದು ಪ್ರಕೃತಿ ಅನ್ನೋ ಆವರ್ಣ ಅಳಿದು ಶುದ್ಧ ಗ್ನಾನಾಂಬಿಕೆ ಆಗೋದು. ಅದು ಸುದ್ಧ ಅಂದ್ರೆ ಸುದ್ಧ. ಅದಕ್ಕೆ ದುಸ್ವಾಸ ಅವಳ ಸೀರೆ ಸೆಳೆದ ಅದು ಕೊನೆ ಮೊದಲು ಇಲ್ಲದ್ದು ಅದನ್ನು ಸೆಳೆಯೋಕೆ ಆಗಲೇ ಇಲ್ಲ."[೧೫] ಹೀಗೆ ಬಯಲಾಟದ ನೆಪದಲ್ಲಿ ಆಧ್ಯಾತ್ಮವನ್ನು ಬೋಧಿಸುವ ಸ್ವಾಮಿಗಳ ಬುದ್ಧಿ ಚಾತುರ್ಯಕ್ಕೆ ಶ್ರೀಯುತ ಶಾಸ್ತ್ರಿಗಳಲ್ಲಿ ಎಲ್ಲರೂ ತಲೆದೂಗಲೇ ಬೇಕು.

ಸ್ವಾಮಿಗಳ ವೈಚಾರಿಕ ಪಕ್ವತೆಗೆ ಇನ್ನೊಂದು ನಿದರ್ಶನ ಕೊಡಬಹುದು. ಒಮ್ಮೆ ಶಾಸ್ತ್ರಿಗಳ ಜೊತೆ ಚರ್ಚಿಸುತ್ತಿದ್ದಾಗ, ಸ್ವಾಮಿಗಳು ಹೇಳುವ ಮಾತುಗಳು ವಿಶಿಷ್ಟ ಅರ್ಥವನ್ನು ಒಳಗೊಂಡಿದೆ. ಜನರು ಶಿವಾಚಾರ್‌ದೋರ್, ಕೆಲವರು ದೇವಾಂಗದೋರ್, ಇನ್ನೂ ಕೆಲವರು ಬ್ರಾಹ್ಮಣರು, ಮತ್ತೆ ಕೆಲವರು

ಸಾಮದೋರು, ಅಡ್ನಗಂದದೋರು ಹೀಗೆ ಒಬ್ರನ್ನ ಕಂಡ್ರೆ ಒಬ್ಬ್ರು ಮಾರು ದೂರ ಹೋಗ್ತಾರೆ ಮಡಿಮೈಲಿಗೆ ಅಂತಾರೆ, ನಗುಬತ್ತೈತೆ, ನಕ್ಕರೆ ಜೈಯ್ತಾರೆ ಎಲ್ಲ ಹುಚ್ಚರಾಟ"[೧೬] ಎಂದು ಜನರ ಮೂಢ ಆಚರಣೆಗಳನ್ನು ಖಂಡಿಸುವ ಸ್ವಾಮೀಜಿ ಜಾತಿವ್ಯವಸ್ಥೆಗೆ 'ಹುಚ್ಚರಾಟ' ಎಂದು ಮೂದಲಿಸಿದ್ದಾರೆ.

ಪ್ರಸ್ತುತ ಬೆಳೆಗೆರೆ ಕೃಷ್ಣಶಾಸ್ತ್ರಿಗಳು ಯಾವುದೇ ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕಾಗಿ ಈ ಕೃತಿಯನ್ನು ಬರೆದಿಲ್ಲ. ಸಹಜಾನುಭಾವ ಬೋಧಯ ರೂಪದಲ್ಲಿ ಆಕೃತಿಗೊಂಡು ಇಲ್ಲಿಯ ಎಲ್ಲ ಪ್ರಸಂಗಗಳು ಅಂತರ್ಬೋದೆಯನ್ನು ಅವಲಂಬಿಸಿವೆ. ಅನೇಕ ಘಟನೆಗಳಿಗೆ ಸಿದ್ಧ ಉತ್ತರ ನೀಡುವುದು ಯಾರಿಗಾದರೂ ಕಷ್ಟ, ಹೊಂದಾಣಿಕೆ ಕಲ್ಪಿಸುವುದು ಇನ್ನೂ ಕಷ್ಟಸಾಧ್ಯ. ಆದರೆ ಪ್ರತ್ಯಕ್ಷಾನುಭವ, ಪ್ರಕೃತ್ಯಾನುಭವಗಳು ಈ ಬಗೆಯ ನೆಲೆಗಳ ಆಚೆ ಇರುತ್ತವೆ. ಶ್ರೀ ಮುಕುಂದೂರು ಸ್ವಾಮಿಗಳು ಅಂತರ್ಬೋಧೆಯನ್ನು ಪಡೆದವರು ಅವರು ಸ್ವಯಂ ಪ್ರಮಾಣವುಳ್ಳ ಮಹಂತರು.[೧೭] ಎಂದು ಹೇಳಿರುವಂತ ಮಲ್ಲೇಪುರಂರವರ ಮಾತುಗಳೇ ಇದಕ್ಕೆ ನಿದರ್ಶನ.

ಶಾಸ್ತ್ರಿಗಳಿಗೆ ಗೇರು ಬೀಜದ ಹಾಲುಬಿದ್ದು, ಮೈಯೆಲ್ಲಾ ವ್ರಣವಾಗಿದ್ದು ಏಳಲಾರದ ಸ್ಥಿತಿಯಲ್ಲಿದ್ದಾಗ, ಯಾವ ವೈದ್ಯರಿಂದಲೂ, ಪಂಡಿತರಿಂದಲೂ ಸಾಧ್ಯವಾಗದ ಶುಶ್ರೂಷೆಯನ್ನು ಕೇವಲ ಧೈರ್ಯ, ಸ್ಥೈರ್ಯ, ತುಂಬುವ ಮೂಲಕ ಗುಣಪಡಿಸಿದ್ದು ಸ್ವಾಮೀಗಳ ಆತ್ಮಸ್ಥೈರ್ಯದ ಘನತೆಯನ್ನು ತೋರಿಸುತ್ತದೆ.

ಇವರು ಲಕ್ಷ್ಮೀಶನ ಜೈಮಿನಿಭಾರತಕ್ಕೆ ತಮ್ಮದೇ ಆದ ಆಧ್ಯಾತ್ಮದ ಲೇಪವನ್ನು ಹಾಕಿ ವಿವರಿಸಿದ ರೀತಿ ಸೋಜಿಗವೇ ಸರಿ. ಜೈಮಿನಿಭಾರತದ ಪ್ರತಿಯೊಂದು ಪಾತ್ರಗಳಿಗೂ ತಮ್ಮದೇ ಆದ ರೀತಿಯಲ್ಲಿ ಅರ್ಥವನ್ನು ಕಟ್ಟುತ್ತ, ಓದುಗರನ್ನು ಆಧ್ಯಾತ್ಮದತ್ತ ಸೆಳೆಯುವ ಇವರ ರೀತಿ ಅತ್ಯಮೋಘ. "ಕಥೆ ನಡ್ಸೋನು ಧರ್ಮರಾಯ ಅಂದ್ರೆ ಧರ್ಮಾನೇ ನಡೆಸೋದು. ಯಜ್ಞದ ಕುದ್ರೆ ಕಟ್ಟು ಅಂತ ಅದ್ರ ಸವಾಲ್, ಆ ಕುದ್ರೆ ಅಂದ್ರೆ ಮನಸ್ಸು ಅದರಿಚ್ಚೆ ಬಂದಂಗೆ ಹೋಗುತ್ತೆ ಇನ್ನೊಬ್ಬರ ಆಜ್ಞೆ ಅದಕ್ಕಿಲ್ಲ. ಅಂದ್ರೆ ಧರ್ಮದ ಯಜ್ಞ ಮಾಡಾಕೆ ಮನಸ್ಸನ್ನು ಕಟ್ಟಬೇಕು. ಅದರಿಚ್ಚೆ ಬಂದಂಗೆ ಬಿಡೋದಲ್ಲ ಎಲ್ರು ಪ್ರಯತ್ನ ಮಾಡ್ತಾರೆ ಕೈಲಾಗೋಲ್ಲ, ಆ ಕುದುರೆ ನೋಡು ಯೌವನಾಶ್ವನ್‌ತಾವ ಇತ್ತು. ಯೌವನ ಅಂದ್ರೆ ಪ್ರಾಯದ ಹಮ್ಮು. ಆ ಕುದುರೆ ಅಲ್ಲಿಂದ ಹಂಸಧ್ವಜ, ಬಬ್ರುವಾಹನ, ತಾಮ್ರಧ್ವಜ, ವೀರವರ್ಮ, ಸಾಹನ ಇವರಾರ ಕೈಲು ಆಗಲಿಲ್ಲ. ಕೊನೆಗೆ ನೋಡು ಚಂದ್ರಹಾಸ, ಅಂದ್ರೆ ಶಾಂತಿ ಸಮಾಧಾನ ಅಲ್ಲಿ ಯುದ್ಧ ಇಲ್ಲ. ಧರ್ಮರಾಯ ಶಾಂತಿ, ಸಮಾಧಾನ ಎಲ್ಲ ಜೊತೆಯಾಯ್ತು ಸಂತೋಷ ಆನಂದ ಫಲಕೊಟ್ಟಿತು. ಆಗ ಬಕದಾಲ ಮುನಿ ಬಂದು ಆಶೀರ್ವಾದ ಮಾಡಿದ. ಆಗ ಈ ಮನಸ್ಸು ಅನ್ನೋ ಕುದ್ರೇನ ಬಲಿಕೊಟ್ಬಂಗಾಯ್ತು."[೧೮]

ಹೀಗೆ ಜೈಮಿನಿಭಾರತದ ಕಥೆಯ ಮೂಲಕ ಧರ್ಮ ಮನಸ್ಸಿನ ಕುರಿತಾದ ಅತ್ಯದ್ಭುತ ವರ್ಣನೆ ನೀಡಿರುವುದು ನಿಜಕ್ಕೂ ಇವರ ಸಾಧನೆಗೆ ಹಿಡಿದ ಕನ್ನಡಿಯಾಗಿದೆ.

ಇವರ ಸಾಮಾನ್ಯ ಮಾತಿನಲ್ಲೂ ಆಧ್ಯಾತ್ಮದ ಸಾರವನ್ನು ಕಾಣಬಹುದು. ಸ್ವಾಮಿಗಳೇ ತನ್ನ ಅಣ್ಣನ ತಲೆ ಕೆಡೆಸಿದ್ದೆಂದು ತಿಳಿದ ಶಾಸ್ತ್ರಿಗಳ ತಂಗಿ ಪಾರ್ವತಮ್ಮ ಅವರನ್ನು ಕಂಡರೆ ಭೀಮಾರಿ ಪೊರಕೆಪೂಜೆ

ಎಂದವರು ಸ್ವಾಮಿಗಳ ನಿಜವ್ಯಕ್ತಿತ್ವವನ್ನು ಕಂಡು ಬೆರಗಾಗಿದ್ದರು. ಹೀಗೆ ಒಮ್ಮೆ ಪಾರ್ವತಮ್ಮ ಸ್ವಾಮಿಗಳ ಜೊತೆ ಮಾತನಾಡುತ್ತಿದ್ದಾಗ ದೋಸೆ ಸೀದದ್ದು ಆಕೆಗೆ ಗೊತ್ತಾಗಲಿಲ್ಲ. ಆಗ ಸ್ವಾಮಿಗಳು ಹೇಳುವ ಮಾತುಗಳು. "ಹೌದು ಶಿವಲಿಂಗಿ ಸೀಯಬೇಕು, ಆಗಲೇ ಅದರ ರೂಪ, ಬಣ್ಣ, ರುಚಿ ಎಲ್ಲ ಸುಟ್ಟು ಹೋಗಿ ಸೀದದ್ದು ಸಿಹಿಯಾಗಿ ಅದೊಂದೇ ಉಳಿಬೇಕು. ಆಗ ನೋಡು ಅದರ ಸವಿ"[೧೯] ಎಂದು ಮನುಷ್ಯನ ಮಾನಸಿಕ ಪಕ್ವತೆಗೆ ಸೀದ ದೋಸೆಯನ್ನೇ ಉದಾಹರಿಸಿ ಹೇಳಿದ್ದಾರೆ.

ಪಂಚೇಂದ್ರಿಯಗಳ ಸೃಷ್ಟಿಯೇ ಒಂದು ಪವಾಡವೆನ್ನುತ್ತಾ, "ಆಹಾರವನ್ನು ಕೈಯಲ್ಲೇ ಕಲಸಿ ತಿಂದರೂ, ರುಚಿಯನ್ನು ನಾಲಿಗೆಯಿಂದಲೇ ತಿಳಿಯಬೇಕು. ಅಂತೆಯೇ ನೋಡುವ ಕೆಲಸ ಕಣ್ಣಿನಿಂದಲೇ ಸಾಧ್ಯ ಹೊರತು, ಅದರ ಪಕ್ಕದಲ್ಲೇ ಇದ್ದರೂ ಕಿವಿಯಿಂದ ಸಾಧ್ಯವಿಲ್ಲ. ಅದೇ ರೀತಿ ಕೇಳಿಸುವುದು ಕಿವಿಗೆ ಹೊರತು ಕಣ್ಣಿಗಲ್ಲ. ಹೀಗೆ ಇವೆಲ್ಲ ಒಂದರ ಮಗ್ಗುಲಲ್ಲೇ ಬಂದಿದ್ರೂನು ಒಂದರ ಕೆಲಸ ಇನ್ನೊಂದಕ್ಕೆ ಹೀಗೆ ಜಗತ್ತಿನಲ್ಲಿ ಎಲ್ಲವೂ ಪವಾಡವೇ, ಈ ಪವಾಡಕ್ಕೆ ಕಾರಣಕರ್ತ ಭಗವಂತ" ಎಂಬುದಾಗಿ ನಿಂತಲ್ಲಿಯೇ ಮನುಷ್ಯದೇಹವೇ ಒಂದು ಪವಾಡವೆಂದಿದ್ದಾರೆ.[೨೦]

ಸಾಮಾನ್ಯ ಮಾತಿನಲ್ಲಿ ಆಧ್ಯಾತ್ಮದ ಸಾರವನ್ನು ಹಿಡಿದಿಡುವ ಸ್ವಾಮಿಯವರ ಮಾತುಗಾರಿಕೆ ಇನ್ನೊಂದು ನಿದರ್ಶನ ತಾವು ಬೆಂಗಳೂರಿಗೆ ಹೋದ ಸನ್ನಿವೇಶವನ್ನು ಅವರು ವಿವರಿಸಿದ್ದು, ಬೆಂಗಳೂರಿಗೆ ಹೊರಟವರು ಬಾಣಾವರವನ್ನು ಬೆಂಗಳೂರೆಂದು ತಿಳಿದದ್ದು. ಕ್ರಮೇಣ ಅದು ಬೆಂಗಳೂರು ಅಲ್ಲವೆಂದು ತಿಳಿದ ಮೇಲೆ ತಿಪಟೂರು, ತುಮಕೂರು ದಾಟಿ ಮುಂದಕ್ಕೋದಾಗ ಗಜಿಬಿಜಿ ಜನಗಳಿಂದ ತಂಬಿದ ಊರು ಸಿಕ್ಕಿತು. ಯಾರಿಂದಲೋ ಅದೇ ಬೆಂಗಳೂರೆಂದು ತಿಳಿಯಿತು. ಎಂದು ಅವರ ಕಥೆಯನ್ನು ಹಿಂಜಿ ನೋಡಿದಾಗ ಶಾಸ್ತ್ರಿಯವರಿಗೆ ಅದರ ಅಂತಃಸತ್ವ ತಿಳಿಯಿತು. ಬೆಂಗಳೂರು ಅಂತಿಮಘಟ್ಟ, ಬಾಣಾವರ ಅರಸೀಕೆರೆ, ತಿಪಟೂರು ಎಂಬುವೆಲ್ಲ ಸಾಧನೆಯ ಹಾದಿಯಲ್ಲಿ ಲಭಿಸುವ ಸಿದ್ಧಿಗಳು.[೨೧] ಸಿಕ್ಕಿದ್ದೇ ಬೆಂಗಳೂರೆಂದು ಭ್ರಮಿಸಿ ನಿಂತುಬಿಟ್ಟರೆ ಪ್ರಗತಿ ಇಲ್ಲ. ಸಿದ್ಧಿಗಳನ್ನು ಲೆಕ್ಕಿಸದೆ ಮುಂದೆ ಮುಂದೆ ಸಾಗಿದರೆ ಅಂತಿಮ ಘಟ್ಟ ತಲುಪಬಹುದು. ಅಲ್ಲಿ ನೋಡಲಿಕ್ಕೆ ಕಣ್ಣೂ ಸಾಲದು, ಮಾತನಾಡುವುದು ಏನೂ ಉಳಿದಿಲ್ಲ, ತಲ್ಲೀನತೆ ಮಾತ್ರ ಎಂಬುದು ಆ ಕಥೆಯ ಒಟ್ಟರ್ಥವಾಗಿತ್ತು. ಧ್ಯಾನದ ಕೊನೆಯ ಹಂತ ಸಮಾಧಿ ಸ್ಥಿತಿಯನ್ನು ತಲುಪುವ ಭಾವ ಇದಾಗಿದೆ.

ಸಾಮಾನ್ಯವಾಗಿ ಎಂಥವರಿಗೂ ಅವಹೇಳನ ತಪ್ಪಿದ್ದಲ್ಲ. ನಮ್ಮ ಸಂಸ್ಕೃತಿಯಲ್ಲಿ ಶ್ರೀ ಕೃಷ್ಣಪರಮಾತ್ಮನಿಗೆ ಅಪವಾದ ತಪ್ಪಿರಲಿಲ್ಲ. ಹೀಗಿರಲು ಸ್ವಾಮಿಯವರ ಘನತೆಯನ್ನು ಅರಿಯದ ಕುಹಕಿಗಳು ಅವರ ಅಪಹಾಸ್ಯ ಮಾಡಿದ್ದೂ ಇದೆ. ಆದರೆ ಚಂದ್ರನಿಗೆ ಅಮಾವಾಸ್ಯೆ ಕಳೆದಾಗ ಹುಣ್ಣಿಮೆ ಹೇಗೆ ಅನಿವಾರ್ಯವೋ ಹಾಗೆಯೇ ಸ್ವಾಮಿಗಳನ್ನು ಅಪಹಾಸ್ಯ ಮಾಡಿದ ಮಂದಿಯೇ ಅವರ ಅನುಯಾಯಿಗಳಾದರೆಂದರೆ ಸ್ವಾಮಿಗಳ ವ್ಯಕ್ತಿತ್ವ ಎಂಥಹುದೆಂದು ಅರಿಯಬಹುದು. ಈ ಒಂದು ಸನ್ನಿವೇಶವನ್ನು ಪ್ರಸ್ತುತ ಘಟನೆಯ ಮೂಲಕ ಈ ರೀತಿ ವಿವರಿಸಬಹುದು.

ದೇವನೂರಿನಲ್ಲಿ ಕನ್ನಡ ಸಂಘದಿಂದ ಗೀತಾ ಜಯಂತಿಯನ್ನು ಆಚರಿಸುವ ಸಂದರ್ಭದಲ್ಲಿ ಊರಿನ ಪ್ರಮುಖರು ಅದರಲ್ಲೂ ತಾವೇ ಮಹಾಪಂಡಿತರೆನಿಸಿಕೊಂಡ ಕೆಲವರು ಹಳ್ಳಿಗಾಡಿನ ಅನಾಗರಿಕ, ಅನಕ್ಷರಸ್ಥ, ಅ ಸಂಸ್ಕಾರಿಕ ಸ್ವಾಮಿಗಳಿಗೆ ಗೀತೆ ಎಂದರೇನೆಂದೇ ತಿಳಿಯದೆಂದುಕೊಂಡು ಅದರಿಂದಲೇ ಗೀತಾಜಯಂತಿಯೆಂದು ಗೀತೋಪನ್ಯಾಸ ಮಾಡಿಸುವ ಮೂಲಕ ಸ್ವಾಮಿಯ ಬಂಡವಾಳ ಬಯಲು ಮಾಡಿ, ಲೇವಡಿ ಮಾಡಿ ಶಾಸ್ತ್ರೀ ಮೇಷ್ಟ್ರಿಗೆ ಬುದ್ಧಿ ಕಲಿಸಬೇಕೆಂದುಕೊಂಡರು. ಆದರೆ ಸ್ವಾಮಿಗಳು ತುಂಬಿದ ಕೊಡ. ತುಂಬಿದ ಕೊಡ ತುಳುಕುವುದಿಲ್ಲ ಹಾಗೆಯೇ ತಾವು ಮಹಾಪಂಡಿತರೆಂದೂ ಯಾವತ್ತೂ ಹೇಳಿ ಮೆರೆದವರಲ್ಲ, ಆದರೆ ಜನರು ತಾವಾಗಿಯೇ ಮಾಡಿದ ಪರೀಕ್ಷೆಯಲ್ಲಿ ಪುಟಕಿಟ್ಟ ಚಿನ್ನವಾಗಿ ಹೊಳೆಯುವ ವ್ಯಕ್ತಿತ್ವ ಅವರದು. ಹಾಗಾಗಿಯೇ ಗೀತೋಪನ್ಯಾಸದ ಸಂದರ್ಭ ಬಂದಾಗ, ನಿಜಗುಣರ ಒಂದು ಹಾಡನ್ನು ತಾಳ, ಲಯ ಬದ್ಧವಾಗಿ ವಿವರಿಸುತ್ತಾ “ಲೋಕ ಹಿತವೇ ಧರ್ಮ, ಧರ್ಮದ ಉಳಿವಿಗಾಗಿ ಕರ್ಮ, ನಿಷ್ಕಾಮದಲ್ಲಿ ತಾನಿಲ್ಲ, ಆದ್ದರಿಂದ ಕರ್ಮ ನನಗೆ ಅಂಟುವುದಿಲ್ಲ. ಅದು ಅಕರ್ಮ, ಕರ್ಮ ಅಂಟುವುದಿಲ್ಲ ಎಂದು ಸುಮ್ಮನೆ ಇರಕೂಡದು, ಅದು ಬೇಜವಾಬ್ದಾರಿ, ಸೋಮಾರಿತನ ಆಗುತ್ತೆ, ಧರ್ಮ ಉಳಿಯಲು ಅಧರ್ಮವನ್ನು ಹೋಗಲಾಡಿಸಬೇಕು. ಇದೆಲ್ಲ ಬಿಟ್ಟು ನನಗ್ಯಾಕೆ ಅಂದರೆ ಅದು ನಿಷ್ಕರ್ಮ ಆಗುತ್ತೆ, ದುಷ್ಕರ್ಮವೂ ಆದೀತು. ಆದ್ದರಿಂದ ಲೋಕಹಿತಕ್ಕಾಗಿ ದುಷ್ಟತನವನ್ನು ಹೊಡೆದು ಹಾಕಲೇಬೇಕು”[೨೭] ಹೀಗೆ ಅಕ್ಷರ ಪರಿಚಯವೇ ಇಲ್ಲದೆ ಗೀತೆಯ ಒಂದು ಸಾಲನ್ನು ಕೇಳದೆ, ಹಳ್ಳಿಯ ಮುಗ್ಧ ಜನರಿಗೆ ಅರ್ಥವಾಗುವಂತೆ ಗೀತೆಯ ಸಾರವನ್ನೇ ಹೇಳಿದ ಸ್ವಾಮಿಯವರ ಹಿರಿಮೆಯ ದರ್ಶನ ಆಗ ಎಲ್ಲರಿಗೂ ಆಗಿತ್ತು.

ಸನ್ಯಾಸಿಯೆಂದು ಹೇಳಿಕೊಂಡು ಖಾವಿ ಧರಿಸಿ, ನಂತರ ಭಂಗಿ ಸೇದಿ ಮೆರೆಯುವವರೆಲ್ಲಾ ಸನ್ಯಾಸಿಗಳಲ್ಲ. ಸ್ವಾಮಿಯವರ ಪ್ರಕಾರ ನಿಜವಾದ ಸನ್ಯಾಸಿ ಅಂದ್ರೆ “ಸರಿಯಾಗಿ ನಡವಳಿಕೆಯಿಂದ ನಡೆಯೋನು, ಭಂಗಿ ಎಂದ್ರೆ ನಡವಳಿಕೆ, ರೀತಿ ನೀತಿ ಅಂತ್ಲೇ ತಿಳಿ. ಸಾರಾಯಿ ಅಂದ್ರೆ ಒಳಗಿನ ಸಾರಾಯಿರೋನು ಅಂತಾ ತಗೋಬೇಕು. ಆಗ ಭಂಗಿ ಸಾರಾಯಿ ಎಲ್ಲ ಒಳ್ಳೆಯದೇ ಅದು ಬಿಟ್ಟು ಕುಡ್ದು ಕುಡ್ದು ಬುದ್ದಿಕೆಟ್ಟರೆ ಅವರೇ ಕೆಡ್ತಾರೆ”[೨೮] ಎಂದು ಸನ್ಯಾಸಿಗಳ ಆಷಾಢಭೂತಿಯನ್ನು ಖಂಡಿಸಿದ್ದಾರೆ.

ಪ್ರಾಣಿಬಲಿಯನ್ನು ವಿರೋಧಿಸುತ್ತಾ ಸ್ವಾಮಿಗಳು ಮೂಕ ಪ್ರಾಣಿಯನ್ನು ಬಲಿಕೊಡುವ ಮಾನವ ತನ್ನಲ್ಲಿರುವ ಮೃಗೀಯ ವ್ಯಕ್ತಿತ್ವವನ್ನು ಬಲಿಕೊಡಬೇಕೆಂದಿದ್ದಾರೆ. ಅದರಂತೆ ಕುರಿಕೋಣ ಬಲಿಕೊಡುವುದರ ಬಗ್ಗೆ ಹೇಳುತ್ತಾ, ತಮ್ಮಲ್ಲಿರುವ ಮಂಕುತನವೇ ಕುರಿ ಎಂದು, ಅದನ್ನು ಕಡಿದರೆ ಒಳ್ಳೆ ತಿಳುವಳಿಕೆ ಬರುತ್ತದೆಂದಿದ್ದಾರೆ. ಹಾಗೆಯೇ “ಜನರಲ್ಲಿರುವ ಅಹಂಕಾರವೇ ಕೋಣವೆಂದು, ಗರ್ವವನ್ನು ಕೊಂದರೆ ಸಜ್ಜನ ಆಗಬಹುದೆಂದು ಹೇಳಿದ್ದಾರೆ. ಇಂಥಾದ್ದು ಬಿಟ್ಟು ಕೆಟ್‌ಗುಣಗಳನ್ನು ಬೆಳಸಿಕೊಂಡು ಪಾಪ ಆ ಮೂಕ ಪ್ರಾಣಿಗಳನ್ನು ಕೊಂದು ದೇವ್ರುಗೆ ಸಂತೋಷ ಮಾಡ್ತೀವಿ ಅಂದ್ರೆ ಅದು ಯಾವ ರೀತಿ”[೨೯] ಎಂದು ಜನರ ಮೂಢತ್ವವನ್ನು ಅಪಹಾಸ್ಯ ಮಾಡಿದ್ದಾರೆ.

ಒಮ್ಮೆ ಕಾಲು ಮುರಿತಕ್ಕೊಳಗಾದ ಸ್ವಾಮಿಗಳನ್ನು ಜನರು ಚಿಕ್ಕಮಗಳೂರಿನ ಆಸ್ಪತ್ರೆಗೆ ಸೇರಿಸಿದರು. ಶಾಸ್ತ್ರಿಗಳಾದರೂ ಪ್ರಖ್ಯಾತ ವೈದ್ಯರನ್ನು ಹಿಡಿದು ಅವರನ್ನು ಗುಣಮುಖರನ್ನಾಗಿಸುವ ಶತಪ್ರಯತ್ನ ನಡೆಸಿದರು. ಆದರೆ ಕೆಲವೇ ದಿನಗಳಲ್ಲಿ ಸ್ವಾಮಿಗಳು ಆಸ್ಪತ್ರೆಯಿಂದ ಕಾಣೆಯಾಗಿದ್ದರು. ಕಾಲುಮುರಿದ ಸ್ಥಿತಿಯಲ್ಲಿ ಅವರು ಹೋದದ್ದಾದರೂ ಹೇಗೆ? ಎಂಬ ಚಿಂತೆ ಸ್ವಾಮಿಗಳನ್ನು ತೀರಾ ಹತ್ತಿರದಿಂದ ಕಂಡ ಶಾಸ್ತ್ರಿಗಳನ್ನು ಕೊರೆಯಿತು. ಕೊನೆಗೂ ತನಗೇನೂ ಆಗಿಲ್ಲವೋ ಎಂಬಂತೆ ಸಲೀಸಾಗಿ ಬೆಟ್ಟವನ್ನು ಹತ್ತಿ ಇಳಿಯುತ್ತಾ ಸ್ವಾಮಿಗಳೇ ಶಾಸ್ತ್ರಿಗಳ ಸಂಶಯ ನಿವಾರಿಸಬೇಕಾಯಿತು. ಹಾಗಾದರೆ ಸ್ವಾಮಿಗಳು ಹೇಗೆ ಗುಣವಾದರು? ಅದಕ್ಕೆ ಸ್ವಾಮೀಜಿ ಕೊಡುವ ಉತ್ತರ ಹೀಗಿದೆ" ಅವನ ಯೆಸರು ಯೇಗ (ಯೋಗ) ಇನ್ನೇನು ಆಯ್ತುಲ್ಲ. ಅವನು ಭಾರಿ ಒಳ್ಳೇನು ಅವನು ಕಾಲು ವಾಸೀ ಮಾಡ್ದ, ವಟ್ಟಿ, ಬಟ್ಟಿ ಎಲ್ಲಾ ಅವನೇ ನೋಡ್ಕಂಡ ಅವನ ಕೈಲಿ ಆಗದ್ದೇನೈತೆ.?"[೨೫]

ಒಟ್ಟೆನಲ್ಲಿ ಸ್ವಾಮಿಗಳ ಪ್ರಕಾರ ಇದು ಯೋಗದ ಮಾಯೆ ಜ್ಞಾನ ಮತ್ತು ಯೋಗಕ್ಕೆ ಮಿತಿಯಿಲ್ಲ. ಅದು ಇಂದ್ರಿಯ ಗ್ರಾಹ್ಯ ಸಂಗತಿ. ಕೇವಲ ಸಾಧನೆಯ ತಿರುಳೇ ಇವರ ಬಂಡವಾಳವಾಗಿತ್ತು

ಈ ಮೊದಲೇ ಹೇಳಿದಂತೆ ಸ್ವಾಮಿಗಳು ತುಂಬಿದ ಕೊಡ. ನಮ್ಮ ನಡುವೆ ಪ್ರಸಿದ್ಧಿಗೆ ಬಂದ ಸ್ವಾಮಿಗಳು ಹಲವಾರು ಮಂದಿ ಇದ್ದಾರೆ. ಆದರೆ ನಿಜಾರ್ಥದ ಸಂತರು ತೀರಾ ಕಡಿಮೆ, ಪ್ರಸ್ತುತ ಪಕ್ಕದ ಹಳ್ಳಿಗೆ ಬಂದ ಸನ್ಯಾಸಿಯ ಮುಂದೆ ಸ್ವಾಮಿಗಳು ವರ್ತಿಸಿದ ರೀತಿಗೂ, ಸ್ವಾಮಿಗಳ ಜೊತೆ ಆ ವ್ಯಕ್ತಿ ವರ್ತಿಸಿದ ರೀತಿಗೂ ಅಜಗಜಾಂತರ ವ್ಯತ್ಯಾಸ ಗಮನಿಸಬಹುದು. ಸ್ವಾಮಿಗಳ ಆ ವಿನಯ, ವಿಧೇಯತೆ, ಅತಿಥಿ ಸತ್ಕಾರ ಸಹಜವಾಗಿಯೇ ಅವರ ತುಂಬು ವ್ಯಕ್ತಿತ್ವವನ್ನು, ಮುಗ್ಧತೆಯನ್ನು ಜೀವನದ ಪರಿಕ್ವತೆಯನ್ನು ಸೂಚಿಸಿದರೆ, ಆ ಸನ್ಯಾಸಿಯ ಮಾತಿನ ವೈಖರಿ, ಅಹಂನ ನಡವಳಿಕೆ, ಸ್ವಾರ್ಥ ಮಾತುಗಾರಿಕೆ ಸ್ವಾಮಿಯೆಂದು ಒಣಾಡಂಬರದ ಮೆರೆಯುವ ಆತನ ಸಣ್ಣತನವನ್ನು ಬಯಲು ಮಾಡುವಂತಿದೆ.

ರಾಮಾಯಣದ ಪ್ರತಿಯೊಂದು ಪಾತ್ರಗಳನ್ನು ತಮ್ಮ ವಿಚಾರದ ಓರೆಗಲ್ಲಿಗೆ ಹಚ್ಚಿ, ಅರ್ಥವನ್ನು ಬಿಚ್ಚುತ್ತಾ ಹಳ್ಳಿಯ ಮುಗ್ಧರಿಗೆ ಅದರ ತಾತ್ವಿಕಾರ್ಥವನ್ನು ಅರ್ಥೈಸುವ ರೀತಿ ಅಚ್ಚರಿ ಹುಟ್ಟಿಸುವಂತಿದೆ, ಸಂಪೂರ್ಣ ಮಹಾಭಾರತದ ಸಾರವನ್ನು ಕೆಲವೇ ಮಾತುಗಳಲ್ಲಿ ಹಿಡಿದಿಟ್ಟು ವರ್ಣಿಸಿದ ಅವರ ಪಾಂಡಿತ್ಯ ಅಮೋಘವಾದುದು. ಸ್ವಾಮಿಗಳಿಗೆ ಮಹಾಭಾರತದ ತಿರುಳೇನೆಂದು ಪ್ರಶ್ನಿಸಿದಾಗ, ಸ್ವಾಮಿಗಳು "ಪಾಂಡವರನ್ನು ಬೆಳಕಿನಿಂದ ಬಂದವರೆಂದೂ ಹಾಗಾಗಿಯೇ ಒಳ್ಳೇದು ಕೆಟ್ಟದ್ದು, ಸರಿ ತಪ್ಪುಗಳೆಲ್ಲಾ ಅವರಿಗೆ ತಿಳಿದೆಂದೂ, ಈ ಬೆಳಕ್ಬಿಟ್ಟು ಕತ್ಲಾಗೇ ಬಂದೋರು ನೂರು ಜನ. ಅಜ್ಞಾನ, ಅಧರ್ಮ ಹಿಡಿದ ಇವರೇ ಕೌರವರು. ಕೃಷ್ಣ ಅಂದರೆ ಕರ್ಮ ಅಂದರೆ ಕರ್ಮ, ಧರ್ಮ ಎಲ್ಲಾ ಹಿಡಿದು ಕರ್ತವ್ಯ ಮಾಡೋನು. ಅವನು ಪಾಂಡವರಿಗೆ ದಾರಿ ತೋರೋನು ಶಕುನಿ. ಅವನು ಕುನ್ನಿ ನಾಯಿ ಕಡಿಯೋದು ಬೊಗಳೋದು ಅದೇ ಅವರ ಸ್ವಭಾವ. ದ್ರೌಪದಿ ಅಂದ್ರೆ ಮರ್ವಾದೆ ಬಟಾಬಯಲು ಆಗಬಾರದು. ಆದರೆ ಕೌರವರ ಅಜ್ಞಾನದಿಂದ ದುರ್ಮಾರ್ಗವೇ ಮುಂದಾಯ್ತು.... ಧರ್ಮಕ್ಕೆ ಅಧರ್ಮಕ್ಕೂ ಭಾರೀ ಹೋರಾಟ ನಡೆದು ಧರ್ಮಕ್ಕೇ ಜಯ ಆಯ್ತು"[೨೬]

ಹೀಗೆ ಮಹಾಭಾರತದ ಸ್ವಾರಸ್ಯವನ್ನು ಹಳ್ಳಿಗರಿಗೆ ಅವರಿಗರ್ಥವಾಗುವ ಗ್ರಾಮ್ಯ ಭಾಷೆಯಲ್ಲೇ ವಿವರಿಸಿದ ರೀತಿ ನೋಡಿದಾಗ ಸೋಜಿಗ ಹುಟ್ಟಿಸುವಂತಿದೆ. "ಒಳ್ಳೆಯದರಲ್ಲಿ ಕೆಟ್ಟದನ್ನು ಹುಡುಕುವುದಕ್ಕಿಂತಲೂ, ಕೆಟ್ಟದರಲ್ಲಿ ಒಳ್ಳೆಯದನ್ನೇ ಹುಡುಕಬೇಕು"[೨೭] ಎಂಬ ಸ್ವಾಮಿಗಳ ಸುಸಂಸ್ಕೃತ ಸೃಷ್ಟಿಗೆ ನಿದರ್ಶನ ರೋಜಾ ಹೂವಿನ ಪ್ರಸಂಗವನ್ನು ಶಾಸ್ತ್ರಿಗಳು ವಿಶ್ಲೇಷಿಸುತ್ತಿದ್ದಾರೆ.

ಒಂದು ರಾತ್ರಿ ಆಶ್ರಮದಲ್ಲಿ ತಂಗಿದ್ದ ದೂರದ ದಂಪತಿಗಳು ಬೆಳಗಾದ ಮೇಲೆ ಹೊರಡಲು ಅನುವಾದಾಗ, ಅವರ ಮಗು ದಟ್ಟವಾಗಿ ಹೂ ಬಿಟ್ಟಿದ್ದ ರೋಜಾ ಹೂವಿನ ಗಿಡವನ್ನು ಕಂಡು ಹೂವಿಗಾಗಿ ಓಡಿತು. ಅದನ್ನು ಕಂಡ ಕೂಸಿನ ತಾಯಿ ಗಿಡದಲ್ಲಿ ಮುಳ್ಳಿದೆ ಮುಟ್ಟದಿರೆಂದು ಮಗುವನ್ನು ಕೂಗಿದಾಗ, ಇದನ್ನು ಕಂಡ ಸ್ವಾಮಿಗಳು "ಅಮ್ಮಯ್ಯ, ಆ ಮಗುವಿಗೆ ಹೂವಿನ ಗಿಡದಾಗೆ ಮುಳ್ಳು ಐತೆ ಎಂತ ಹೇಳ್ಕೊಡಬೇಡ, ಮುಳ್ಳಿನ ಗಿಡ್ದಾಗೆ ಹೂವು ಐತೆ ಎಂತ ಹೇಳ್ಕೊಡಬೇಕು"[೨೮] ಎಂದು ನಕ್ಕರು.

"ಏಕ ಅದರೆ ಒಂದು, ದಶ ಅಂದರೆ ಹತ್ತು. ಈ ಹತ್ತನ್ನು ಒಂದು ಮಾಡಿದರೆ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳನ್ನು ಒಂದು ಕಡೆ ಸೇರಿಸಿದರೆ ಅಲ್ಲಿಗೆ ಏಕಾದಶಿಯಾಯಿತು"[೨೯] ಎಂದು ಏಕಾದಶಿ, ದ್ವಾದಶ, ತ್ರಯೋದಶಿಯ ಬಗ್ಗೆ ಸ್ವಾಮಿಗಳು ಹೇಳುವ ಅರ್ಥ ಅಪೂರ್ವ ಅರ್ಥಗಳನ್ನೊಳಗೊಂಡಿರುತ್ತದೆ. ಕೇಳುಗರಿಗೆ ಅಲೌಕಿಕ ವಾತಾವರಣವನ್ನು ಉಂಟುಮಾಡುತ್ತಿತ್ತು.

ಕರಡಿಗವಿಯಲ್ಲಿ ಶರಣಮ್ಮ (ಕಣ್ಣಮ್ಮ) ನವರನ್ನು ಬೇಟಿಯಾದ ಸ್ವಾಮಿಗಳು, ಪಕ್ಕದೂರಿಗೆ ಬಂದಾಗ ಅಲ್ಲಿಯ ವ್ಯಕ್ತಿಯೊಬ್ಬನಿಂದ ಸ್ವಾಮಿಗಳ ಮತ್ತೊಂದು ಪವಾಡವನ್ನು ಕೇಳುವ ಅವಕಾಶ ಒದಗಿ ಬಂತು ಎಂದು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ.

ಆ ವ್ಯಕ್ತಿಯ ಊರಿನಲ್ಲಿ ಋತುಮತಿಯಾದ ಹೆಣ್ಣುಮಕ್ಕಳು ಮೂರು ತಿಂಗ್ಳು, ಆರು ತಿಂಗಳಲ್ಲಿ ಸತ್ತು ಹೋಗುತ್ತಿದ್ದರು. ಹೀಗಿರಲು ಒಮ್ಮೆ ಸ್ವಾಮಿಗಳು ಅಲ್ಲಿಗೆ ಬಂದು, ಮೂರು ದಿನ ರಾತ್ರಿ ಯಾರನ್ನೂ ಹೊರಗೆ ಬರದಿರಿ ಎಂದು ಹೇಳಿ, ಮೂರು ದಿನದ ನಂತರ ಊರಿನ ಬಾವಿಯ ಕೆಟ್ಟ ನೀರನ್ನೆಲ್ಲಾ ತೆಗೆದು, ಗಂಗಾಪೂಜೆ ಮಾಡಿ ನಂತರ ಬಾವಿಯ ನೀರಿನ ಉಪಯೋಗ ಮಾಡಲು ಹೇಳಿದರು. ಆ ನಂತರ ಊರಿನ ಹೆಣ್ಣುಮಕ್ಕಳು ಯಾರೂ ಋತುಮತಿಯಾದಾಗ ಸಾಯುತ್ತಿರಲಿಲ್ಲ. ಹೀಗೆ ಊರನ್ನೇ ಕಾಪಾಡಿದ ಆ ಸ್ವಾಮಿಗಳ ಬಗೆಗೆ ಆ ಊರಿನ ಜನತೆಗೆ ಭಕ್ತಿ ಗೌರವವಿತ್ತು.

ಅಂತೂ ಅದ್ಭುತವಾದ ಸಾಧನೆಗಳನ್ನು ಮಾಡಿ, ವಿಶೇಷವಾದ ಸಿದ್ಧಿಗಳನ್ನು ಪಡೆದಿದ್ದರೂ, ಎಂದೂ ಪ್ರಚಾರಕ್ಕಾಗಿ ಬಳಸದೆ ಅವುಗಳನ್ನೆಲ್ಲಾ ಅವುಗಳ ಪಾಡಿಗೆ ಬಿಟ್ಟು ತಾವು ಪ್ರತ್ಯೇಕವಾಗಿಯೇ ಉಳಿದು ಆನಂದಿಸುತ್ತಿದ್ದ ಅವರು ಆ ಸಿದ್ಧಿಗಳಿಗಿಂತ ಮೇಲಿದ್ದ ಮಹನೀಯರೆಂದೂ, ಆ ಕಾರಣಕ್ಕಾಗಿಯೇ ಅವರು ತನಗೆ ಗೌರವಾನ್ವಿತರೆಂದು ಶಾಸ್ತ್ರಿಗಳು ಸ್ವಾಮಿಗಳ ಮೇಲಿರುವ ತಮ್ಮ ಗೌರವಾಭಿಮಾನವನ್ನು ಈ ಮೂಲಕ ವ್ಯಕ್ತಪಡಿಸಿದ್ದಾರೆ.

ಸ್ವಾಮಿಗಳ ಮಾತುಗಳು ಎಷ್ಟೋ ಸಲ ಹಾಸ್ಯ ಬೆರೆತಂತಿದ್ದರೂ ಯೋಗೀಶ್ವರರ ತತ್ವವಿಚಾರ, ಪರಿಣಿತರ ಶ್ಲೇಷಾಲಂಕಾರ ಇತ್ಯಾದಿಗಳು ಯಥೇಚ್ಛವಾಗಿ ಇರುತ್ತಿತ್ತು.

ಹೀಗೆ ಮಹಾಭಾರತದ ಸ್ವಾರಸ್ಯವನ್ನು ಹಳ್ಳಿಗರಿಗೆ ಅವರಿಗರ್ಥವಾಗುವ ಗ್ರಾಮ್ಯ ಭಾಷೆಯಲ್ಲೇ ವಿವರಿಸಿದ ರೀತಿ ನೋಡಿದಾಗ ಸೋಜಿಗ ಹುಟ್ಟಿಸುವಂತಿದೆ. "ಒಳ್ಳೆಯದರಲ್ಲಿ ಕೆಟ್ಟದನ್ನು ಹುಡುಕುವುದಕ್ಕಿಂತಲೂ, ಕೆಟ್ಟದರಲ್ಲಿ ಒಳ್ಳೆಯದನ್ನೇ ಹುಡುಕಬೇಕು"[೨೭] ಎಂಬ ಸ್ವಾಮಿಗಳ ಸುಸಂಸ್ಕೃತ ಸೃಷ್ಟಿಗೆ ನಿದರ್ಶನ ರೋಜಾ ಹೂವಿನ ಪ್ರಸಂಗವನ್ನು ಶಾಸ್ತ್ರಿಗಳು ವಿಶ್ಲೇಷಿಸುತ್ತಿದ್ದಾರೆ.

ಒಂದು ರಾತ್ರಿ ಆಶ್ರಮದಲ್ಲಿ ತಂಗಿದ್ದ ದೂರದ ದಂಪತಿಗಳು ಬೆಳಗಾದ ಮೇಲೆ ಹೊರಡಲು ಅನುವಾದಾಗ, ಅವರ ಮಗು ದಟ್ಟವಾಗಿ ಹೂ ಬಿಟ್ಟಿದ್ದ ರೋಜಾ ಹೂವಿನ ಗಿಡವನ್ನು ಕಂಡು ಹೂವಿಗಾಗಿ ಓಡಿತು. ಅದನ್ನು ಕಂಡ ಕೂಸಿನ ತಾಯಿ ಗಿಡದಲ್ಲಿ ಮುಳ್ಳಿದೆ ಮುಟ್ಟದಿರೆಂದು ಮಗುವನ್ನು ಕೂಗಿದಾಗ, ಇದನ್ನು ಕಂಡ ಸ್ವಾಮಿಗಳು "ಅಮ್ಮಯ್ಯ, ಆ ಮಗುವಿಗೆ ಹೂವಿನ ಗಿಡದಾಗೆ ಮುಳ್ಳು ಐತೆ ಎಂತ ಹೇಳ್ಕೊಡಬೇಡ, ಮುಳ್ಳಿನ ಗಿಡ್ದಾಗೆ ಹೂವು ಐತೆ ಎಂತ ಹೇಳ್ಕೊಡಬೇಕು"[೨೮] ಎಂದು ನಕ್ಕರು.

"ಏಕ ಅದರೆ ಒಂದು, ದಶ ಅಂದರೆ ಹತ್ತು. ಈ ಹತ್ತನ್ನು ಒಂದು ಮಾಡಿದರೆ ಕರ್ಮೇಂದ್ರಿಯಗಳು, ಜ್ಞಾನೇಂದ್ರಿಯಗಳನ್ನು ಒಂದು ಕಡೆ ಸೇರಿಸಿದರೆ ಅಲ್ಲಿಗೆ ಏಕಾದಶಿಯಾಯಿತು"[೨೯] ಎಂದು ಏಕಾದಶಿ, ದ್ವಾದಶ, ತ್ರಯೋದಶಿಯ ಬಗ್ಗೆ ಸ್ವಾಮಿಗಳು ಹೇಳುವ ಅರ್ಥ ಅಪೂರ್ವ ಅರ್ಥಗಳನ್ನೊಳಗೊಂಡಿರುತ್ತದೆ. ಕೇಳುಗರಿಗೆ ಅಲೌಕಿಕ ವಾತಾವರಣವನ್ನು ಉಂಟುಮಾಡುತ್ತಿತ್ತು.

ಕರಡಿಗವಿಯಲ್ಲಿ ಶರಣಮ್ಮ (ಕಣ್ಣಮ್ಮ) ನವರನ್ನು ಬೇಟಿಯಾದ ಸ್ವಾಮಿಗಳು, ಪಕ್ಕದೂರಿಗೆ ಬಂದಾಗ ಅಲ್ಲಿಯ ವ್ಯಕ್ತಿಯೊಬ್ಬನಿಂದ ಸ್ವಾಮಿಗಳ ಮತ್ತೊಂದು ಪವಾಡವನ್ನು ಕೇಳುವ ಅವಕಾಶ ಒದಗಿ ಬಂತು ಎಂದು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ.

ಆ ವ್ಯಕ್ತಿಯ ಊರಿನಲ್ಲಿ ಋತುಮತಿಯಾದ ಹೆಣ್ಣುಮಕ್ಕಳು ಮೂರು ತಿಂಗ್ಳು, ಆರು ತಿಂಗಳಲ್ಲಿ ಸತ್ತು ಹೋಗುತ್ತಿದ್ದರು. ಹೀಗಿರಲು ಒಮ್ಮೆ ಸ್ವಾಮಿಗಳು ಅಲ್ಲಿಗೆ ಬಂದು, ಮೂರು ದಿನ ರಾತ್ರಿ ಯಾರನ್ನೂ ಹೊರಗೆ ಬರದಿರಿ ಎಂದು ಹೇಳಿ, ಮೂರು ದಿನದ ನಂತರ ಊರಿನ ಬಾವಿಯ ಕೆಟ್ಟ ನೀರನ್ನೆಲ್ಲಾ ತೆಗೆದು, ಗಂಗಾಪೂಜೆ ಮಾಡಿ ನಂತರ ಬಾವಿಯ ನೀರಿನ ಉಪಯೋಗ ಮಾಡಲು ಹೇಳಿದರು. ಆ ನಂತರ ಊರಿನ ಹೆಣ್ಣುಮಕ್ಕಳು ಯಾರೂ ಋತುಮತಿಯಾದಾಗ ಸಾಯುತ್ತಿರಲಿಲ್ಲ. ಹೀಗೆ ಊರನ್ನೇ ಕಾಪಾಡಿದ ಆ ಸ್ವಾಮಿಗಳ ಬಗೆಗೆ ಆ ಊರಿನ ಜನತೆಗೆ ಭಕ್ತಿ ಗೌರವವಿತ್ತು.

ಅಂತೂ ಅದ್ಭುತವಾದ ಸಾಧನೆಗಳನ್ನು ಮಾಡಿ, ವಿಶೇಷವಾದ ಸಿದ್ಧಿಗಳನ್ನು ಪಡೆದಿದ್ದರೂ, ಎಂದೂ ಪ್ರಚಾರಕ್ಕಾಗಿ ಬಳಸದೆ ಅವುಗಳನ್ನೆಲ್ಲಾ ಅವುಗಳ ಪಾಡಿಗೆ ಬಿಟ್ಟು ತಾವು ಪ್ರತ್ಯೇಕವಾಗಿಯೇ ಉಳಿದು ಆನಂದಿಸುತ್ತಿದ್ದ ಅವರು ಆ ಸಿದ್ಧಿಗಳಿಗಿಂತ ಮೇಲಿದ್ದ ಮಹನೀಯರೆಂದೂ, ಆ ಕಾರಣಕ್ಕಾಗಿಯೇ ಅವರು ತನಗೆ ಗೌರವಾನ್ವಿತರೆಂದು ಶಾಸ್ತ್ರಿಗಳು ಸ್ವಾಮಿಗಳ ಮೇಲಿರುವ ತಮ್ಮ ಗೌರವಾಭಿಮಾನವನ್ನು ಈ ಮೂಲಕ ವ್ಯಕ್ತಪಡಿಸಿದ್ದಾರೆ.

ಸ್ವಾಮಿಗಳ ಮಾತುಗಳು ಎಷ್ಟೋ ಸಲ ಹಾಸ್ಯ ಬೆರೆತಂತಿದ್ದರೂ ಯೋಗೀಶ್ವರರ ತತ್ವವಿಚಾರ, ಪರಿಣಿತರ ಶ್ಲೇಷಾಲಂಕಾರ ಇತ್ಯಾದಿಗಳು ಯಥೇಚ್ಛವಾಗಿ ಇರುತ್ತಿತ್ತು.

ಭಕ್ತನೊಬ್ಬನು ಊಟಕ್ಕೆ ಕರೆಯುವಾಗ ಶಿವಪೂಜೆಗೆ ಬರಬೇಕು ಸ್ವಾಮಿ ಎಂದರೆ "ಅದ್ಯಾವಾಗ್ನಿಂದಿತ್ತಪ್ಪಯ್ಯ?"[೩೦] ಎಂದಾಗ ಇವರ ಯೋಗಾಭ್ಯಾಸದ ಮಟ್ಟ ಎಂತಹುದೆಂದು ಗೋಚರವಾಗುತ್ತದೆ.

ಶಿಷ್ಯನೊಬ್ಬನು ಇವರ ಬಳಿ ಮಾತನಾಡುತ್ತ ಒಬ್ಬ ಮಡಿವಂತರನ್ನು ಕುರಿತು, ಅವರು ದಿನಕ್ಕೆ ಐದು ಸಲ ಸ್ನಾನ ಮಾಡುತ್ತಾರೆ ಎಂದು ತಿಳಿಸಿದಾಗ, "ಅಧ್ಯಾಕಪ್ಪಾ ಮೈಲಿಗೆ ಆಗ್ತಾರಪ್ಪ?"[೩೧] ಎಂದು ಹೇಳಿ ಬಾಹ್ಯ ಶರೀರದ ಮಡಿವಂತಿಕೆಗೆ ಹೋಲಿಸಿ ಅಂತರಂಗದ ಮಡಿಯ ಶ್ರೇಷ್ಠತೆಯನ್ನು ಬೋಧಿಸುವ ಸೂಚನೆ ಮಾಡಿದ್ದಾರೆ.

ಈ ರೀತಿ ಬದುಕಿ ಬಾಳಿದ ಶ್ರೀ ಮುಕುಂದೂರು ಸ್ವಾಮಿಗಳು ದೇಹತ್ಯಾಗ ಮಾಡುವಾಗಲೂ ಯೋಗ ಮಾಯೆಯ ಬಂಧನವೋ ಎಂಬಂತೆ ಶಾಸ್ತ್ರಿಗಳಿಗೆ ಧ್ಯಾನದಲ್ಲಿ ಕಾಣಿಸಿಕೊಂಡು ತಮ್ಮ ಸಾವಿನ ಟೆಲಿಪತಿ ಸಂದೇಶ ತಲುಪಿಸಿದ್ದರು. ತಮ್ಮ ಸಂಸ್ಕಾರದ ವೇಳೆ ಭಕ್ತೆ ಗೌರವಜ್ಜಿ ಪರಿತಪಿಸಿದಾಗ, ಅವಳ ಇಚ್ಛೆಯನ್ನು ಅನುಗ್ರಹಿಸಿ ಪೂರೈಸಿದರು.

ಸ್ವಾಮಿಗಳು ದೇಹ ಬಿಟ್ಟ ನಂತರವೂ ಆಯಾ ಸಮಯಕ್ಕೆ ತಕ್ಕಂತೆ ತಮ್ಮ ದರ್ಶನ, ಆಶೀರ್ವಾದ, ಅನುಗ್ರಹಗಳನ್ನು ಸೂಕ್ಷ್ಮವಾಗಿ ನೀಡಿದ್ದಾರೆನ್ನುವುದಕ್ಕೆ ಶಾಸ್ತ್ರಿಯವರೇ ಹೇಳುವ ಘಟನೆಯನ್ನು ನೋಡಬಹುದು.

ಒಮ್ಮೆ ಶಾಸ್ತ್ರಿಯವರ ಮಿತ್ರರಿಗೆ ಜಾತಕದ ಸೂಚನೆಯಂತೆ ಮರಣ ನಿಗಧಿಯಾಗಿತ್ತು. ಧೈರ್ಯಗುಂದಿದ ಮಿತ್ರರು ಆಸ್ತಿಪಾಸ್ತಿ ಎಲ್ಲಾ ಹಂಚಿ ಮರಣವನ್ನು ಎದುರು ನೋಡುತ್ತಿದ್ದರು. ಆಗ ಶಾಸ್ತ್ರೀಯವರ ಧ್ಯಾನದಲ್ಲಿ ಸ್ವಾಮಿಗಳು ಕಾಣಿಸಿಕೊಂಡು ಮರಣದ ಹಾದಿಯನ್ನು ನೋಡುತ್ತಿರುವ ವ್ಯಕ್ತಿಗೆ ಆತ್ಮಸ್ಥೈರ್ಯ ತುಂಬಿ ಸ್ವಾಮಿಗಳ ಕುರಿತಾಗಿ ಹೇಳಿ ನಂತರ ಸ್ವಾಮಿಗಳ ಸಂದೇಶವನ್ನು ಹೇಳಿದರು. ಆಗಾಗಲೇ ಇವರ ಮರಣದ ಅವಧಿ ಮೀರಿ ಹೋಗಿತ್ತು. ಹೀಗೆ ಆತ್ಮಸ್ಥೈರ್ಯವೊಂದೇ ಎಲ್ಲಾ ಸಾಧನೆಗೂ ಮೂಲ ಎಂಬ ಅಮೂಲ್ಯ ತತ್ವವನ್ನು ಸ್ವಾಮಿಗಳ ಅನುಗ್ರಹದಿಂದ ತಿಳಿಯುವಂತಾಯಿತು.

ಶಾಸ್ತ್ರಿಗಳು ಹಿಮಾಲಯಕ್ಕೆ ಹೋಗಿ ಬಂದು ಸ್ವಾಮಿಗಳ ಎದುರು ಹಿಮಾಲಯದ ವರ್ಣನೆ ಮಾಡುತ್ತಾರಷ್ಟೆ, ಆಗ ಸ್ವಾಮಿಗಳ 'ಹಿಮಾ-ಲಯ' ಆಗಬೇಕು ಎನ್ನುತ್ತಾರೆ. "ಈ ಮಾತಿನ ಧ್ವನಿ ನಮಗೆಲ್ಲರಿಗೂ ಆಗಬೇಕು. ನಮ್ಮನ್ನು ಮುತ್ತಿರುವ ಅಹಂಕಾರ, ಮಮಕಾರ, ದುರ್ಗುಣ, ದುರ್ಜಡತೆಗಳು ನಮ್ಮನ್ನು ಹಿಮದಂತೆ ಮುಚ್ಚಿವೆ. ಇವು ಲಯವಾದಾಗ ಆತ್ಮಸಾಕ್ಷಾತ್ಕಾರ ಆಗುತ್ತದೆ. ಅಲ್ಲಿಗೆ ಕೈಲಾಸ ಕಂಡಂತೆ, ನಮ್ಮನ್ನು ಮುತ್ತಿರುವ ಈ ಸಂಗತಿಗಳಿಂದ ಪಾರಾಗಲು ಈ ಬಗೆಯ ಪುಸ್ತಕಗಳು ಬೇಕು. ಇವು ಮನುಷ್ಯನ ಒಳಗಿರುವ ಬೆಳಕನ್ನು ಉದ್ದೀಪಿಸುತ್ತದೆ. ಕತ್ತಲನ್ನು ಕಳೆದು ದೀಪವನ್ನು ಬೆಳಗಿಸುತ್ತವೆ"[೩೨] ಎಂಬ ಪ್ರೊ.ಮಲ್ಲೇಪುರಂ ಮಾತುಗಳು ಉಲ್ಲೇಖನೀಯ.

ಈ ಸಮಾಜದ ಮೇಲು-ಕೀಳು, ಜಾತಿ, ಅಂಧತ್ವವನ್ನು ಗಂಭೀರವಾಗಿಯೇ ಖಂಡಿಸಿದರು ಸ್ವಾಮಿಗಳು, "ಒಬ್ಬ ಹರಿಜನ ಹುಡ್ಗ ಗುಡಿಗೆ ಹೋಗಿ ಮೈಲಿಗೆ ಆಯ್ತು" ಎಂದು ಜನರು ಹೇಳಿದಾಗ,

ಸ್ವಾಮಿಗಳು ಒಬ್ಬ ಹರಿಜನರ ಹುಡುಗ ದೇವರ ಗುಡಿಯಾಕೋದ್ರೆ ಆ ದೇವರಿಗೆ ಮೈಲಿಗೆ ಬಂದು ಸೂತ್ಕ ಆಯ್ತು. ಅಂದ್ಮೇಲೆ ಆ ಇಂದುಳಿದೋನ ಪೌರು ಯಂತಾದ್ದಿರಬೇಕು. ದೇವರ ಪವರಿನಿಂದ ಅವನು ಸುದ್ಧ ಆಗಿ ಚೋಕ್ಕವಾಗ್ಬೇಕಪ್ಪಾ, ಅದು ಬಿಟ್ಟು ಸಕ್ತೇನೇ ದೊಡ್ಡಾಗಿ ದೇವರೇ ಕೆಟ್ಹೋಯ್ತು ಅಂದ್ರೆ ಅದೆಂತ ದೇವ್ರು?”[೩೩] ಎಂಬುದಾಗಿ ಬಹಿರಂಗವಾಗಿಯೇ ಜನರ ಮೂಢ ರೀತಿಯನ್ನು ಕಂಡು ನಕ್ಕು ಕಟಕಿಯಾಡುತ್ತಾರೆ.

ಸ್ವಾಮಿಯವರದು ನಿರಹಂಕಾರಿ ಮನೋವೃತ್ತಿ, ತಾವೆಷ್ಟೇ ಸಿದ್ಧಿ ಸಾಧನೆಗಳನ್ನು ಸಂಪಾದಿಸಿರೂ. ಆ ಅಹಂನಿಂದ ಮೆರೆದವರಲ್ಲ. ಇಂತಹ ಮಹಾನುಭಾವಿ ಸ್ವಾಮಿಗಳ ಸಹಚರ್ಯ ದೊರೆತ ಶಾಸ್ತ್ರಿಗಳೇ ಪುಣ್ಯಜೀವಿ. ಯೋಗಸಿದ್ಧರೂ ಜ್ಞಾನವೃದ್ಧರೂ ಆದ ಶ್ರೀಯುತ ಮುಕುಂದೂರು ಸ್ವಾಮಿಗಳ ಪುಣ್ಯಕಥೆಯೇ ‘ಯೇಗ್ದಾಗೆಲ್ಲಾ ಐತೆ’ ಈ ಪುಸ್ತಕವನ್ನು ಓದುವುದೇ ಒಂದು ದಿವ್ಯಾನುಭವ, ಪ್ರಸ್ತುತ ಕೃತಿ ಆಧ್ಯಾತ್ಮರಂಗಕ್ಕೂ-ಸಾಹಿತ್ಯರಂಗಕ್ಕೂ ಉತ್ತಮ ಕಾಣಿಕೆಯೇ ಸರಿ.

ಇಂತಹ ಮಹನೀಯರೊಂದಿಗೆ ಕೆಲವಾರು ವರ್ಷಗಳು ನಿಕಟ ಸಂಪರ್ಕವನ್ನು ಇಟ್ಟುಕೊಂಡಿದ್ದ ಶ್ರೀ ಕೃಷ್ಣಶಾಸ್ತ್ರೀಯವರು ಈ ಗ್ರಂಥವನ್ನು ಬರೆದು, ಶಾಸ್ತ್ರ, ಸಾಹಿತ್ಯವೇತ್ತರವಲ್ಲದವರೂ ಯೋಗಸಿದ್ಧಿಯನ್ನು ಪಡೆದವರು ಇರುತ್ತಾರೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಇಂಹ ಪುಸ್ತಕವನ್ನು ಬರೆಯಲು ಶ್ರೀ ಶಾಸ್ತ್ರೀಯವರಿಗೆ ವಿಶಿಷ್ಟ ಅರ್ಹತೆ ಇತ್ತು ಎಂದು ಹೇಳಬಹುದಾಗಿದೆ.

## ಅಡಿಟಿಪ್ಪಣಿ

೦೧. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಲೇಖಕರ ಮಾತು, ಪು-೧
೦೨. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೧, ೨೦೦೭
೦೩. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೨, ೨೦೦೭
೦೪. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, (ಮೊದಲ ಮುದ್ರಣಕ್ಕೆ ಬರೆದ ಲೇಖರ ಮಾತು)
೦೫. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಅನುಬಂಧ, ಬೆರಗಬೆಳಗಿನ ಮಾಯೆ, ಪು-iii
೦೬. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಮೊದಲ ಮುನ್ನುಡಿಯಿಂದ, ಕಾಳಿಂಗಕೃಷ್ಣ
೦೭. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೨೦
೦೮. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೨೧
೦೯. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೨೨
೧೦. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಮೊದಲ ಮುನ್ನುಡಿಯಿಂದ, ಕಾಳಿಂಗಕೃಷ್ಣ
೧೧. ಯೇಗ್ದಾಗೆಲ್ಲಾ ಐತೆ, ಲೇ ಬೆಳಗೆರೆಕೃಷ್ಣಶಾಸ್ತ್ರಿ, ಪು-೧೦೧
೧೨. ಅದೇ, ಪು-೨೭
೧೩. ಅದೇ, ಪು-೩೦
೧೪. ಅದೇ, ಪು-೩೧
೧೫. ಅದೇ, ಪು-೩೩
೧೬. ಅದೇ, ಪು-೩೯
೧೭. ಅದೇ, ಪು-೧೧೩
೧೮. ಅದೇ, ಪು-೪೪
೧೯. ಅದೇ, ಪು-೪೭
೨೦. ಅದೇ, ಪು-೪೮
೨೧. ಅದೇ, ಪು-೪೯
೨೨. ಅದೇ, ಪು-೫೮
೨೩. ಅದೇ, ಪು-೫೩
೨೪. ಅದೇ, ಪು-೫೪
೨೫. ಅದೇ, ಪು-೬೬
೨೬. ಅದೇ, ಪು-೭೯
೨೭. ಅದೇ, ಪು-೮೧
೨೮. ಅದೇ, ಪು-೮೧
೨೯. ಅದೇ, ಪು-೮೧
೩೦. ಅದೇ, ಪು-೮೭
೩೧. ಅದೇ, ಪು-೮೭
೩೨. ಅದೇ, ಪು-೧೧೫
೩೩. ಅದೇ, ಪು-೧೦೦

## ೩.೩. ಮರೆಯಲಾದೀತೆ

ಗ್ರಾಮೀಣ ಪ್ರತಿಭೆಗಳು, ಸಮಾಜಸೇವಾ ಬಂಧುಗಳು, ಆಧ್ಯಾತ್ಮಿಕ ಸಾಧಕರು, ಸಾಹಿತಿಗಳೊಂದಿಗೆ ಒಡನಾಟದ ನೆನಪುಗಳನ್ನು ಕೃಷ್ಣಶಾಸ್ತ್ರಿಗಳು ತಮ್ಮ ಮರೆಯಲಾದೀತೇ ಕೃತಿಯ ಮೂಲಕ ಮೆಲುಕುಹಾಕುತ್ತಾರೆ. ಸರಳ ಮತ್ತು ಸಾದಾ ವ್ಯಕ್ತಿತ್ವಕ್ಕೆ ಮತ್ತೊಂದು ಹೆಸರು ಬೆಳಗೆರೆ ಕೃಷ್ಣಶಾಸ್ತ್ರಿ, ಶ್ರೀಯುತ ಶಾಸ್ತ್ರಿಗಳು ಹಳ್ಳಿಯೊಂದರಲ್ಲಿ ತಮ್ಮಷ್ಟಕ್ಕೆ ತಾವೇ ಸಮಾಜ ಸೇವೆ ಮಾಡಿಕೊಂಡಿರುವವರು. ಅವರು ಬರೆದದ್ದು ಇರಬೇಕಾದ ಆದರ್ಶದ ಬದುಕನ್ನಲ್ಲ, ಬದುಕಿದ ಬಗೆಗಳನ್ನು ಬೈರಪ್ಪ, ಕರೀಂಖಾನ್, ಕಾಳಿಂಗ ಕೃಷ್ಣ, ರಾಮಜ್ಜ, ಗುಜ್ಜಪ್ಪ, ಸಿದ್ದಯ್ಯ, ಗಗ್ಗರಂಗಪ್ಪ, ಕಣ್ಣಮ್ಮ ಹೀಗೆ ಯಾರೇ ಆಗಿರಲಿ ಅವರದೇ ಮಾತು ಶೈಲಿಗಳಲ್ಲಿ ಅವರ ವ್ಯಕ್ತಿತ್ವಗಳನ್ನು ತಮ್ಮ ನೆನಪುಗಳ ಮೂಲಕ ಕಟ್ಟಿಕೊಡುವುದು ಕೃಷ್ಣಶಾಸ್ತ್ರಿಗಳ ಈ ಕೃತಿಯ ವಿಶೇಷ. ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಿರುವ ಹಲವು ವ್ಯಕ್ತಿಗಳ ಬಗ್ಗೆ ಅವರು ಹೊಂದಿರುವಂತಹ ವಿಶೇಷತೆಯನ್ನು ಈ ಕೆಳಕಂಡಂತೆ ತಿಳಿಯಬಹುದಾಗಿದೆ.

### ಎ.ಅನ್ನಪೂರ್ಣಮ್ಮ, ಗಿರಯಜ್ಜಿ, ಸುಂದ್ರಮ್ಮ

ಕೃಷ್ಣಶಾಸ್ತ್ರಿಗಳ ತಾಯಿಯವರಾದ ಅನ್ನಪೂರ್ಣಮ್ಮ ನವರು ಅವರ ಸೀಮೆಗೆಲ್ಲಾ ಲೇಡಿ ಡಾಕ್ಟರ್ ಇದ್ದಂತೆ. ಅವರು ಆಯುರ್ವೇದ ವೈದ್ಯದಲ್ಲಿ ಪರಿಣತಿಯನ್ನು ಪರಂಪರಾನುಗತವಾಗಿ ಹೊಂದಿದ್ದರು. ಹೆಣ್ಣುಮಕ್ಕಳಿಗೆ, ಗಂಡಸರಿಗೆ, ಮಕ್ಕಳ ರೋಗಗಳಿಗೆ ಇವರು ಔಷಧಿಯನ್ನು ಕೊಡುತ್ತಿದ್ದರು. ತಮ್ಮ ಮನೆಯ ಸುತ್ತಮುತ್ತ ಬೆಳೆದ, ಬೆಳೆಸಿದ ಯಾವುದೇ ಗಿಡಮೂಲಿಕೆ, ಬಳ್ಳಿ, ಬೇರುಗಳನ್ನು ಬಳಸಿ ಔಷದಿ ತಯಾರಿಸುತ್ತಿದ್ದರು. ರೋಗಿಗಳನ್ನು ಕೆಲವೊಮ್ಮೆ ತಮ್ಮ ಮನೆಯಲ್ಲಿಯೇ ಇರಿಸಿಕೊಂಡು ಊಟ, ಉಪಚಾರ, ಔಷಧಿ ಪಥ್ಯಗಳನ್ನು ಕಾಲಕಾಲಕ್ಕೆ ಕೊಟ್ಟು ಗುಣವಾದ ಬಳಿಕ ಕಳಿಸುತ್ತಿದ್ದರು. ಇಷ್ಟೆಲ್ಲಾ ಮಾಡಿದರೂ ಯಾವುದಕ್ಕೂ ಹಣ, ತೆಗೆದುಕೊಳ್ಳುತ್ತಿರಲಿಲ್ಲ, ಯಾರಾದರೂ ಹಣ ಕೊಡುವುದಕ್ಕೆ ಬಂದರೆ, "ಅನ್ನ ಮಾರಬಾರ್ದು, ಹಾಲು ಮಾರಬಾರ್ದು ಹಾಗೇ ಔಷ್ಟಿನೂ ಮಾರಬಾರ್ದು ಕಣಪ್ಪ, ಏನೋ ದೇವ್ರು ಕಲಿಸಿದ್ದಾನೆ ಅದನ್ನ ಮಾರಕ್ಕಲ್ಲ"[೧] ಎಂದು ಬಿಡುತ್ತಿದ್ದಳು ಎಂಬುದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಿದ್ದಾರೆ. ಯಾವುದೇ ಪ್ರತಿಫಲವನ್ನು ಬಯಸದೆ ನಿಸ್ವಾರ್ಥ ಸೇವೆಯನ್ನು ಮಾಡುವಂತಹ ಅನ್ನಪೂರ್ಣಮ್ಮನವರ ವ್ಯಕ್ತಿತ್ವವನ್ನು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

ಅನ್ನಪೂರ್ಣಮ್ಮನವರಿಗೆ ಸ್ವಲ್ಪ ಓದು ಬರಹ ಬರುತ್ತಿತ್ತು. ಹಳೆಯ ಕಾಲದ ಹಾಡುಗಳ ಪುಸ್ತಕಗಳು ಉದಾ:- ನಳಚರಿತ್ರೆ, ಅಭಿಮನ್ಯು, ಶಶಿರೇಖಾ ಪರಿಣಯ, ಉದ್ದಾಲಕನ ಹಾಡು ಇತ್ಯಾದಿ, ಅವನ್ನೆಲ್ಲ ತಮ್ಮ ಅಜುಬಾಜಿನ ಹೆಣ್ಣುಮಕ್ಕಳನ್ನೆಲ್ಲಾ ಕರೆದು ಓದುತ್ತಿದ್ದರು ಹಾಗೂ ಹಾಡುತ್ತಿದ್ದರು ಎಂಬುದನ್ನು ಶಾಸ್ತ್ರಿಗಳು ಅನ್ನಪೂರ್ಣಮ್ಮನವರ ಇನ್ನೊಂದು ಮುಖವನ್ನು ಇಲ್ಲಿ ನೆನಪಿಸಿಕೊಳ್ಳುತ್ತಿದ್ದಾರೆ.

ಬಾಲ್ಯ ವಿವಾಹವನ್ನು ಮಾಡಿದಾಗ ಆಗುವಂತಹ ತೊಂದರೆಗಳ ಬಗ್ಗೆ ಕೃಷ್ಣಶಾಸ್ತ್ರಿಗಳು ಗಿರಿಯಜ್ಜಿ ಮುಖಾಂತರ ವಿವರಿಸುತ್ತಾರೆ. "ಗಿರಿಯಜ್ಜಿ ವಿಧವೆಯಾದಾಗ ಒಂಬತ್ತು ವರ್ಷ ಎಂಟುವರ್ಷಕ್ಕೆ ಮದುವೆ

ಮಾಡಿಬಿಟ್ಟಿದ್ದಾರೆ. ಆಕೆಗೆ ಗಂಡ ಎಂದರೆ ಯಾರು? ಮದುವೆ ಎಂದರೆ ಏನು? ಸಾಯೋದು ಎಂದರೇನು? ಗೊತ್ತಿಲ್ಲದ ವಯಸ್ಸು ಯಾವುದೇ ಪ್ರಜ್ಞೆ ಇಲ್ಲದ ವಯಸ್ಸು ಗಂಡ ಸತ್ತೋದ ಎಂದು ಹೇಳಿ ಎಲ್ಲರು ಅಳುತ್ತಿದ್ದರೆ ಯಾಕೆ ನೀವೆಲ್ಲ ಅಳ್ತಿದ್ದೀರಿ?"[೨] ಎಂದು ಕೇಳುವಂಥಾ ವಯಸ್ಸು ಅದು. ಕುಂಟೂ ಬಿಲ್ಲೆ ಆಡಿಕೊಂಡು ನಗುನಗುತ್ತಾ ಓಡಾಡಿಕೊಂಡಿದ್ದ ಹುಡುಗಿ ಗಿರಿಯಜ್ಜಿಗೆ ಕೇಶ ಮುಂಡನ ಮಾಡಿಸಬೇಕಾಗಿತ್ತು ಆದರೆ ಕೃಷ್ಣಶಾಸ್ತ್ರಿಗಳ ತಂದೆ ಹಾಗೂ ತಾತನವರಿಂದ ತಿರಸ್ಕರಿಸಲಾಯಿತು. ಬಾಲ ವಿಧವೆಗೆ ಇರುವಂತಹ ಆಸೆ ಆಕಾಂಕ್ಷೆಗಳನ್ನು, ಅವರು ಪಡುವ ವ್ಯಥೆಯನ್ನು ಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸಿದ್ದಾರೆ.

ಕಳ್ಳರಿಗೂ ಕೂಡ ಇದ್ದಂತಹ ನಿಯತ್ತನ್ನು ಕೃಷ್ಣಶಾಸ್ತ್ರಿಗಳು ಕಳ್ನಿಂಗನ ಮೂಲಕ ಇಲ್ಲಿ ವ್ಯಕ್ತ ಪಡಿಸಿದ್ದಾರೆ. ಒಮ್ಮೆ ಗಿರಿಯಜ್ಜಿಯು ಮೈಮೇಲೆ ತುಂಬಾ ಆಭರಣಗಳನ್ನು ಹಾಕಿಕೊಂಡು ಊರಲ್ಲೆಲ್ಲಾ ತಿರುಗುತ್ತಿದ್ದನ್ನು ಕಂಡು ಕಳ್ನಿಂಗ, ಒಂಟಿಯಾಗಿ ಸಿಕ್ಕ ಹುಡುಗಿಯನ್ನು ಏನೂ ಮಾಡದೆ, ಅವಳನ್ನು ತಮ್ಮ ಮನೆಗೆ ಕರೆತಂದು "ಹೀಗೆ ಹೊರಗಡೆ ಕಳುಹಿಸಬೇಡಿ" ಎಂಬಂತಹ ಬುದ್ಧಿವಾದವನ್ನು ಹೇಳಿದಂತಹ ಕಳ್ನಿಂಗನ ವ್ಯಕ್ತಿತ್ವವನ್ನು, ಚಿಕ್ಕಮಗು ಅದರ ಮೇಲೆ ಆಕ್ರಮಣ ಮಾಡಬಾರದೆನ್ನುವ ಪ್ರಜ್ಞೆ ಒಬ್ಬ ಕಳ್ಳನಿಗಿರಬೇಕಾದರೆ ಆತನ ಕಸುಬಿನಲ್ಲೂ ಇದ್ದ ನಿಯತ್ತು ಎಂತಹದ್ದು? ಎಂಬಂತಹ ಕಳ್ನಿಂಗನನ್ನು ಶಾಸ್ತ್ರಿಗಳು ಇಲ್ಲಿ ಪರಿಚಯಿಸಿದ್ದಾರೆ.

ಸೀತಾರಾಮಶಾಸ್ತ್ರಿಗಳ ಹೆಂಡತಿಯಾದ ಸುಭದ್ರಮ್ಮನವರು ಸಾತ್ವಿಕ ಸ್ವಭಾವ, ಮನೆತನವೂ ಸುಸಂಸ್ಕೃತವಾದದ್ದು, ಯಾರನ್ನೇ ಆಗಲಿ ತುಂಬಾ ಅಭಿಮಾನದಿಂದ ಗೌರವದಿಂದ ಮಾತನಾಡಿಸುವ ಗುಣ, ಅವರು ತಮ್ಮ ಗಂಡ ತೀರಿಕೊಂಡ ಮೇಲೆ ಪೂರ್ಣ ಆಧ್ಯಾತ್ಮದ ಕಡೆಗೆ ತಮ್ಮ ಆಸಕ್ತಿಯನ್ನು ಬೆಳೆಸಿಕೊಂಡಿದ್ದರು ಎನ್ನುವಂತಹ ಸುಭದ್ರಮ್ಮನವರ ವ್ಯಕ್ತಿತ್ವವನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ. ಸುಭದ್ರಮ್ಮನವರು ಸಾವಿನ ಬಗ್ಗೆ ಹೊಂದಿದಂತಹ ನಿಲುವು ಏನೆಂದರೆ "ಸತ್ತರೆ ಸತ್ತೆ ಎನ್ನುವುದು ಕೂಡ ಗೊತ್ತಾಗದ ಹಾಗೆ ಸಾಯಬೇಕು, ನಿದ್ರೆಯಲ್ಲಿ ಮಲಗಿದ ಹಾಗೆ ಸತ್ತು ಬಿಡಬೇಕು," ಎಂಬಂತಹ ಉತ್ತಮ ವ್ಯಕ್ತಿತ್ವವನ್ನು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

ಚಂದ್ರಶೇಖರಶಾಸ್ತ್ರಿಗಳು ಬಯಸಿದಂತಹ ಮರಣವನ್ನು, ಹೊಂದಿದಂತಹ ರೀತಿಯನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ವಿವರಿಸುತ್ತಾರೆ. ಯಾವುದೇ ಗೊಡ್ಡು ಸಂಪ್ರದಾಯಗಳ ಮೂಲಕ ನನ್ನ ಶವಸಂಸ್ಕಾರ ಮಾಡಬೇಡಿ ಎಂಬುದಾಗಿಯೂ ಸಹ ಹೇಳಿದಂತಹ ಚಂದ್ರಶೇಖರಶಾಸ್ತ್ರಿಗಳ ವ್ಯಕ್ತಿತ್ವವನ್ನು ಇಲ್ಲಿ ಕೃಷ್ಣಶಾಸ್ತ್ರಿಗಳು ಮೆಲುಕು ಹಾಕಿದ್ದಾರೆ. ಶಿಕ್ಷಕನು ಹೊಂದಿರಬೇಕಾದ ಗುಣಗಳು, ವ್ಯಕ್ತಿತ್ವ ಎಂತಹದ್ದು ಇರಬೇಕು ಎಂಬುದರ ಬಗ್ಗೆ ಶಾಸ್ತ್ರಿಗಳು, ತಮ್ಮ ಗುರುಗಳಾದ ಸಿದ್ದಯ್ಯರವರ ಮೂಲಕ ಇಲ್ಲಿ ತಿಳಿಯಪಡಿಸುತ್ತಾರೆ.

ಯಾರೇ ಆಗಿರಲಿ ಅವರ ವರ್ತನೆಯಲ್ಲಿಯೇ ಅವರ ಯೋಗ್ಯತೆಯನ್ನು ಗುರುತಿಸುವುದು ಸಿದ್ದಯ್ಯನವರ ವ್ಯಕ್ತಿತ್ವದಲ್ಲಿತ್ತು. ಒಬ್ಬ ಮೇಲಾಧಿಕಾರಿ ಕೊಟ್ಟ ಆದೇಶವನ್ನು ಹಿಂದಿರುಗಿಸುವಂತಹ ಸಿದ್ದಯ್ಯನವರ ದಿಟ್ಟತನವನ್ನು ಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸಿದ್ದಾರೆ. ಸಿದ್ದಯ್ಯನವರಿಗಿದ್ದ ಸಾಹಿತ್ಯಿಕ ಜ್ಞಾನ,

ಶಿಕ್ಷಕ ವೃತ್ತಿಯ ಬಗೆಗಿನ ನಿಷ್ಠೆ, ದಕ್ಷತೆಯನ್ನು ಇಲ್ಲಿ ಪರಿಚಯಿಸಲಾಗಿದೆ. "ಏನ್ ಹುಡುಗರಿಗೆ ಯಾವಾಗ್ಲೂ ಪಾಠ ಮಾಡ್ತೋದು ಎನ್ನುವವನೂ ಉಪಾದ್ಯಯ ಆಗಬಾರದು. ಇದೇ ಕೂಳು, ಇದೇ ಬಾಳು ಎಂಬುವವನಿಗೆ ಮಾತ್ರ ಉಪಾದ್ಯಾಯ ವೃತ್ತಿ"[೩] ಎಂಬುದು ಸಿದ್ದಯ್ಯನವರ ಸಿದ್ಧಾಂತವಾಗಿತ್ತು.

"ಉಪಾಧ್ಯಾಯನಾಗಿರುವವನು ಬಡವನಾಗಿರಬೇಕು, ಐಶ್ವರ್ಯ ಬಂದರೆ ಯಾರಿಗೆ ಕೊಡಲಿ? ಇದರಿಂದ ಎಷ್ಟು ಬಡ್ಡಿ ಬರುತ್ತೆ? ಮತ್ತೆಲ್ಲಿ ತೊಡಗಿಸಲಿ? ಅದರಿಂದೇನು ಬರುತ್ತೆ? ಹೀಗೆ ಯೋಚಿಸುವುದರಿಂದ ಶಾಲೆಯ ಕಡೆಗೆ ಗಮನ ಕೊಡದೆ ವಿದ್ಯಾರ್ಥಿಗಳಿಗೆ ಅನ್ಯಾಯವಾಗುತ್ತದೆ. ಉಪಾಧ್ಯಾಯನಾದವನು ತದೇಕ ವೃತ್ತಿ ಎನ್ನುವಂತೆ ಕೆಲಸ ಮಾಡಬೇಕು"[೪] ಎಂಬಂತಹ ವಿಶೇಷ ಗುಣಗಳನ್ನು ಸಿದ್ದಯ್ಯನವರು ಹೊಂದಿದ್ದರು ಎಂಬುದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ.

ಸಿದ್ಧಯ್ಯ ಮರಳಿನ ಮೇಲೆ ಅಕ್ಷರ ಬರೆದು ಮೇಷ್ಟ್ರಾದದ್ದು ಒಂದು ವಿಶೇಷ ಸಾಧನೆ ಅಷ್ಟೇ ಅಲ್ಲ ಪಂಪ, ರನ್ನ, ಕುಮಾರವ್ಯಾಸ, ಷಡಕ್ಷರಿ, ಚಾಮರಸ, ಲಕ್ಷ್ಮೀಶ ಮುಂತಾದ ಕವಿಗಳು ಸಿದ್ಧಯ್ಯನವರ ನಾಲಿಗೆ ಮೇಲೆ ಕುಣಿಯುತ್ತಿದ್ದರು. ಸಿದ್ಧಯ್ಯನವರು ಕಾವ್ಯದ ಅರ್ಥ ಚಮತ್ಕಾರ, ಭಾಷಾ ಪ್ರಯೋಗ, ಶೈಲಿ, ಲಯ, ಛಂದಸ್ಸು ಎಂಬಂತಹ ಹಲವಾರು ಅಂಶಗಳ ಬಗ್ಗೆ ಚೆನ್ನಾಗಿ ಅರಿತಿದ್ದರು ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸಿದ್ದಾರೆ.

ಕೃಷ್ಣಶಾಸ್ತ್ರಿಗಳು ಭಗವದ್ಗೀತೆಯನ್ನು ಕುರಿತು ಹೇಳಿದಂತಹ ಒಂದೇ ವಾಕ್ಯವನ್ನು ಅದರ ಸಂದರ್ಭವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

"ಯಾವುದೇ ಕರ್ತವ್ಯವನ್ನು ನಿಷ್ಠೆಯಿಂದ ಅಹಂಕಾರವಿಲ್ಲದೆ. ಮಾಡಬೇಕು"[೫] ಎಂಬುದಾಗಿ ಶಾಸ್ತ್ರಿಗಳು ಭಗವದ್ಗೀತೆಯನ್ನು ಕುರಿತು ಒಂದೇ ವಾಕ್ಯದಲ್ಲಿ ಹೇಳಿದ್ದರು.

ಸಿದ್ಧಯ್ಯನವರು ಕೃಷ್ಣಶಾಸ್ತ್ರಿಗಳ ಮೇಲೆ ಕೇವಲ ಅಭಿಮಾನವನ್ನಷ್ಟೇ ಇಟ್ಟಿರಲಿಲ್ಲ, ಅವರನ್ನು ತಿದ್ದಿ ಬೆಳೆಸಿದರು ಎಂಬುದಾಗಿ ನೆನಪಿಸಿಕೊಂಡಿದ್ದಾರೆ.

"ಉಪಾಧ್ಯಾಯ ವೃತ್ತಿ ಸಿಗಬೇಕಾದರೆ ಏಳೇಳು ಜನ್ಮಗಳ ಪುಣ್ಯ ಮಾಡಿರಬೇಕು
ಉಪಾಧ್ಯಾಯನು ವಿದ್ಯಾರ್ಥಿಗೆ ಬೋಧಿಸುವುದೆಂದರೆ ಅದೊಂದು ಆಧ್ಯಾತ್ಮಿಕ ಕ್ರಿಯೆ"

ದಿ|| ಜಿ.ಸಿದ್ಧಯ್ಯ[೬]

ಸುಮಾರು ಇಪ್ಪತ್ತು ಸಾವಿರ ಶಬ್ದಗಳ ನಿಘಂಟನ್ನು ಹಳ್ಳಿಯ ಮೂಲೆಯೊಂದರಲ್ಲಿ ಕುಳಿತು ರಚಿಸಿದ ಪ್ರೈಮರಿ ಸ್ಕೂಲ್ ಮೇಷ್ಟ್ರು ಅಲ್ಲಿಸಾಬ್ ಅವರನ್ನು ಶಾಸ್ತ್ರಿಗಳು ಇಲ್ಲಿ ಗುರುತಿಸಿದ್ದಾರೆ.

ಈಗಿನ ಕಾಲದಲ್ಲಿ ಇರುವಂತಹ ನಿಘಂಟು ರಚನೆಗೆ ಅದಕ್ಕೊಂದು ಸಮಿತಿ, ಸ್ಥಳ, ಲಕ್ಷಾಂತರ ರೂಪಾಯಿ ಹೀಗೆಲ್ಲ ಇರುತ್ತದೆ. ಇಂತಹದರಲ್ಲಿ ಸ್ವತಃ ತಮ್ಮ ಅನುಭವ, ಬುದ್ಧಿಶಕ್ತಿಯಿಂದಲೇ, ಎಲ್ಲಿಯೂ ತಿದ್ದಿರುವ, ಹೊಡೆದುಹಾಕಿರುವ ಗುರುತುಗಳಿರದ, ಅಚ್ಚುಕಟ್ಟಾಗಿ ಸ್ಫುಟವಾಗಿ ಬರೆದಂತಹ ನಿಘಂಟಿನ ಬಗ್ಗೆ ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸಿದ್ದಾರೆ.

ಇಂತಹ ನಿಘಂಟನ್ನು ಅಲ್ಲಿಸಾಬ್ ರವರ ಜೀವಿತ ಅವಧಿಯಲ್ಲಿ ಪ್ರಕಟಣೆ ಆಗಲಿಲ್ಲ ಎಂಬುದು ವಿಷಾದ, ಅವರ ಮರಣದ ನಂತರದ ದಿನಗಳಲ್ಲಿ ರಾಜ್ಯಪಾಲರಾಗಿದ್ದ ಚತುರ್ವೇದಿಯವರ ಕೈಯಿಂದ ಈ ನಿಘಂಟನ್ನು ಬಿಡುಗಡೆ ಮಾಡಲಾಯಿತು[೭] ಎಂಬುದಾಗಿ ಕೃಷ್ಣಶಾಸ್ತ್ರಿಗಳು ವಿವರಿಸಿದ್ದಾರೆ.

ಒಬ್ಬ ಹಳ್ಳಿಯ ಅನಕ್ಷರಸ್ಥ, ಮುದುಕನ ಜಾಣ್ಮೆ, ಬುದ್ಧಿವಂತಿಕೆ, ಪದಗಳಲ್ಲಿ ಘಟನೆಗಳ ವಿವರಗಳನ್ನು ಕಟ್ಟಿಕೊಡುವಂತಹ ರಾಮಜ್ಜನ ಬಗ್ಗೆ ಶಾಸ್ತ್ರಿಗಳು ಇಲ್ಲಿ ಪ್ರಸ್ತಾಪಿಸಿದ್ದಾರೆ. ರಾಮಜ್ಜ ಕೋರ್ಟ್‌ನಲ್ಲಿ ವಕೀಲರಿಗೆ ನೀಡುವಂತಹ ಉತ್ತರಗಳು ತುಂಬಾ ಆಶ್ಚರ್ಯಕರವಾಗಿ ಕಂಡುಬರುತ್ತಿವೆ. ಇಂತಹ ಅದ್ಭುತವಾದ ಮಾತಿನ ಚಾಣಚಕ್ಯತೆಯನ್ನು ಹೊಂದಿರುವ ರಾಮಜ್ಜನ ಬಾಯಿಯೆಲ್ಲಾ ಗಾದೆಗಳು ಪುಂಖಾನುಪುಂಖವಾಗಿ ಹರಿದು ಬರುತ್ತವೆ, ಅವು ಸನ್ನಿವೇಶಕ್ಕೆ ಅರ್ಥವಾಗುತ್ತಿರುತ್ತವೆ ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ರಾಮಜ್ಜನನ್ನು ಅವನ ಪ್ರತಿಭೆಯನ್ನು ಗುರ್ತಿಸಿದ್ದಾರೆ.

ಹತ್ತು ಸಾವಿರ ಜನಪದ ಗೀತೆಗಳನ್ನು ಹಾಡಿದ ಸಿರಿ, ಜಾನಪದ ಭಂಡಾರ, ಜಾನಪದ ವಿಶ್ವಕೋಶ, ಕಂಪ್ಯೂಟರ್ ಎಂದೆಲ್ಲಾ ಕರೆಯುತ್ತಿರುವ ಸಿರಿಯಜ್ಜಿಯವರನ್ನು ಗುರ್ತಿಸಿದ್ದು ಕೃಷ್ಣಶಾಸ್ತ್ರಿಗಳೇ. ಸಿರಿಯಜ್ಜಿ ಕೇವಲ ಹಾಡುಗಾರ್ತಿ ಮಾತ್ರವಲ್ಲ, ಅನಕ್ಷರಸ್ಥೆಯಾದರೂ ಹಾಡುವ ಹಾಡಿನಲ್ಲಿರುವ ವಿಶೇಷತೆ ಏನೆಂಬುದನ್ನೂ, ಆ ಹಾಡಿನಲ್ಲಿ ವಿಶೇಷವಾಗಿ ಬಳಕೆಯಾಗಿರುವ ಪದಗಳ ಅರ್ಥಗಳನ್ನೂ ಹೇಳುತ್ತಾಳೆ. ಇಂತಹ ಸಿರಿಯಜ್ಜಿಯ ಮೇಲೆ ಮಾಡಿದಂತಹ ಸಂಶೋಧನೆಗೆ ಹನೂರು ಕೃಷ್ಣಮೂರ್ತಿಯವರಿಗೆ ಡಾಕ್ಟರೇಟ್ ಕೂಡ ಲಭಿಸಿದೆ. ಇನ್ನೊಂದು ವಿಪರ್ಯಾಸದ ಸಂಗತಿ ಎಂದರೆ ಕರ್ನಾಟಕದ ಜಾನಪದ ಕಲಾವಿದರ ಪರಿಚಯವಿರುವ ಪುಸ್ತಕ 'ಗರಿಗೆದರಿದ ನವಿಲು' ಎನ್ನುವ ಪುಸ್ತಕದಲ್ಲಿ ಸಿರಿಯಜ್ಜಿಯ ಹೆಸರು ಇಲ್ಲದಿರುವುದು. ಇದು ಸಿರಿಯಜ್ಜಿಯಂತಹ ಕಲಾವಿದರಿಗೆ ಮಾಡಿದ ಅನ್ಯಾಯವೆಂದೇ ಕೃಷ್ಣಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸುತ್ತಾರೆ.

ನಿಟ್ಟೂರು ಶ್ರೀನಿವಾಸರಾಯರು ಹೊಂದಿದ್ದಂತಹ ಆಧ್ಯಾತ್ಮಿಕ ಸಾಧನೆಯ ಗುರುತುಗಳನ್ನು ಕೃಷ್ಣಶಾಸ್ತ್ರಿಗಳು ಈ ಕೃತಿಯ ಮೂಲಕ ತಿಳಿಯಪಡಿಸುತ್ತಿದ್ದಾರೆ. ಶ್ರೀನಿವಾಸರಾಯರು ತಮ್ಮ ಕಷ್ಟ, ನೋವುಗಳನ್ನು ಮರೆತು ಅವರು ಸ್ನೇಹಿತರನ್ನು ನೋಡುವ ಬಗೆ, ಅವರಿಂದ ವಿಷಯಗಳನ್ನು ತಿಳಿಯಲು ತೋರುವ ಆಸಕ್ತಿ, ಉತ್ಸಾಹ ಇವೆಲ್ಲವೂ ಆಧ್ಯಾತ್ಮಿಕ ಸಾಧನೆಯೆಂದೇ ತೋರುತ್ತದೆ. ಯಾಕೆಂದರೆ ಅವರನ್ನು ಬಹಳ ಹತ್ತಿರದಿಂದ ನೋಡಿದ ಶಾಸ್ತ್ರಿಗಳು, ಪಾದುಕೆಗಳನ್ನು ಹಾಕಿಕೊಂಡು ಓಡಾಡಿದ್ದು, ಕೈಯಲ್ಲಿ ಜಪಸರ ಹಿಡಿದುಕೊಂಡದ್ದು, ಧ್ಯಾನಾಸಕ್ತರಾಗಿ ಕುಳಿತಿದ್ದು, ಇವೆಲ್ಲವೂ ಅವರ ಆಧ್ಯಾತ್ಮಿಕ ಸಾಧನೆಗಾಗಿ, ವ್ಯಕ್ತಿತ್ವದ ಬೆಳವಣಿಗೆಗೆ ಬೆಳೆಸಿಕೊಂಡದ್ದು, ಬಂದ ಕಷ್ಟಗಳನ್ನೆಲ್ಲಾ ದೂರಕ್ಕೆ ತಳ್ಳಿ ಸ್ಥಿತ ಪ್ರಜ್ಞತೆಯನ್ನು ಸಾಧಿಸಿರುವಂಥದಾಗಿರಬಹುದು. ಮನಸ್ಸನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದಾಗಬಹುದು. ಎನ್ನುವಂತಹ ಆಧ್ಯಾತ್ಮಿಕ ಸಾಧನೆಯ ಗುರುತುಗಳನ್ನು ಕೃಷ್ಣಶಾಸ್ತ್ರಿಗಳು ನಿಟ್ಟೂರು ಶ್ರೀನಿವಾಸರಾಯರಲ್ಲಿ ಗುರ್ತಿಸಿದ್ದಾರೆ.

ಜಾನಪದ ಲೋಕದ ದಿಗ್ಗಜರೂ, ಸ್ವಾತಂತ್ರ್ಯ ಹೋರಾಟಗಾರರೂ, ಕಾದಂಬರಿಕಾರರೂ, ನಾಟಕಕಾರರೂ, ಚಲನಚಿತ್ರ ಸಾಹಿತಿಗಳೂ ಆದ ಎಸ್.ಕೆ.ಕರೀಂಖಾನ್‌ರವರನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಾ ಅವರಲ್ಲಿರುವಂತಹ ವಿಶೇಷತೆಯನ್ನು ವಿಶ್ಲೇಷಿಸಿದ್ದಾರೆ.

ಕರೀಂಖಾನ್‌ರವರು ಬರವಣಿಗೆ ಶುರು ಮಾಡಿದ್ದು ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ, ಅವರ ಬರವಣಿಗೆಯು ಹೇಗಿತ್ತೆಂದರೆ "ರಾಷ್ಟ್ರಘಾತಕನು, ನಿರ್ಲಜ್ಜನೂ, ಮೃಗ ಸ್ವಭಾವದವನೂ, ಪರಮನೀಚನೂ, ಧನಕ್ಕಾಗಿ, ಪದವಿಗಾಗಿ, ಐಚ್ಛಿಕ ವಸ್ತುಗಳ ಗಳಿಕೆಗಾಗಿ ಸ್ವಾತಂತ್ರ್ಯವನ್ನು ಧರ್ಮವನ್ನು, ನೀತಿಯನ್ನು ತ್ಯಜಿಸಿ ಪಾರತಂತ್ರ್ಯಕ್ಕೆ ಶರಣು ಹೋಗುವನು, ಆದರೆ ಸ್ವಾಭಿಮಾನವುಳ್ಳ ಸತ್ಯಾತ್ಮನು ವಿಪತ್ ಪರಂಪರೆಗಳಿಂದ ಹೃದಯ ವಿಚ್ಛಿದ್ರವಾಗಿರಲಿ, ಕಷ್ಟ ಜೀವನದಿಂದ ಚಿಂತಾತ್ಮವು ಕಳವಳಗೊಂಡಿರಲಿ, ದುಃಖವೂ ಮೇಲೆದ್ದು ಬರಲಿ, ಇಡೀ ಜಗತ್ತೇ ತನ್ನನ್ನೂ ಎದುರಿಸಲಿ, ಖಡ್ಗ ಶಲ್ಯಗಳ ತೀಕ್ಷ್ಣ ವಿಘಾತಗಳಿಂದ ದೇಹವಲ್ಲ ಜರ್ಜರಿತವಾಗಿರಲಿ, ತನ್ನ ದೇಹವು ಮಾರಣಕಾರಕ ಶೂಲದೆಡೆಗೆ ತಳ್ಳಲ್ಪಡುತ್ತಿರಲಿ, ಆದರೂ ಆತನು ಸ್ವಾತಂತ್ರ್ಯಗೀತೆಯನ್ನು ಹಾಡುತ್ತಲೇ ಹೋಗುವನು. ಸ್ವಾತಂತ್ರ್ಯ ಸನ್ಮಾರ್ಗವನ್ನು ತಿಳಿಯುತ್ತಲೇ ನಡೆಯುವನು"[೮] ಎಂದು ಕರೀಂಖಾನ್‌ರವರು ಕಂಠ ಮಾಡಿದವರಂತೆ ಸ್ಪಷ್ಟವಾಗಿ ಹೇಳುತ್ತಾ ಹೋದದ್ದನ್ನು ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸುತ್ತಾರೆ. ಕರೀಂಖಾನ್‌ರವರ ನಟವರ ಗಂಗಾಧರ ಹಾಡು ಕೇಳದ ಕನ್ನಡಿಗರಿಲ್ಲ, ಧರ್ಮಸ್ಥಳ ಮಂಜುನಾಥಸ್ವಾಮಿಯ ಬಗೆಗೂ ಹಾಡೂ ಬರೆದಿದ್ದಾರೆ. ಕರೀಂಖಾನರದು ವೈವಿಧ್ಯಮಯ ಜೀವನ, ಅವರ ಸಾಹಿತ್ಯ, ಸಂಗೀತ ರಚನೆಗಳ ಜೊತೆ ಜೊತೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದ್ದರು.

ಕರೀಂಖಾನರು ಗುರುತಿಸುವಂತೆ ಸ್ವಾತಂತ್ರ್ಯದ ಪೂರ್ವದಲ್ಲಿದ್ದ ಕಲ್ಪನೆಯೇ ಬೇರೆ ಈಗಿನ ವಾಸ್ತವದ ಚಿತ್ರಣವೇ ಬೇರೆ. ಆದರೆ ಈ ಮಧ್ಯೆ ಕೂಡ ಆ ಶುದ್ಧತೆಯನ್ನು ಕೆಲವರು ಉಳಿಸಿಕೊಂಡಿದ್ದಾರೆ. ಇಂತಹವರ ಸಾಲಿನಲ್ಲಿ ಕರೀಂಖಾನರು ಒಬ್ಬರು ಎಂದು ಶಾಸ್ತ್ರಿಗಳು ಅಭಿಪ್ರಾಯ ಪಡುತ್ತಾರೆ.

ವೃದ್ಧಾಪ್ಯ ಅಸಹಾಯಕತೆ, ಅನಾರೋಗ್ಯದ ನಡುವೆಯೂ ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುವಂತಹ ಪೆನ್ಷನ್ ತೆಗೆದುಕೊಳ್ಳಲು ನಿರಾಕರಿಸಿದ 'ಪಾರವ್ವ'ಳನ್ನು ಕರೀಂಖಾನ್‌ರ ಮೂಲಕ ಪರಿಚಯಿಸಿಕೊಂಡರು. ದೇಶಕ್ಕಾಗಿ ದುಡಿದವರು. ಅಪಮಾನಗಳನ್ನು ಅನುಭವಿಸಿದವರು ವೃದ್ಧಾಪ್ಯ ಹಂತದಲ್ಲಿರುವವರು ತಮ್ಮ ನಿತ್ಯ ಜೀವನಕ್ಕಾಗಿ ಒಂದಷ್ಟು ಹಣ ಪಡೆದರೆ ತಪ್ಪೇನಿಲ್ಲ ಎಂದು ಹೇಳಿದರೂ ಸಹ ಪಾರವ್ವ "ತಾನು ಮಾಡಿದ್ದು ಹಣಕ್ಕಾಗಿ ಅಲ್ಲ"[೯] ಎಂಬುದಾಗಿ ಹೇಳಿದ್ದನ್ನು ಶಾಸ್ತ್ರಿಗಳು ಕರೀಂಖಾನರ ಮೂಲಕ ಇಲ್ಲಿ ವಿವರಿಸುತ್ತಿದ್ದಾರೆ.

ಕರೀಂಖಾನರು ರಾಜಕಾರಣದ ಬಗ್ಗೆ ನಿರ್ಲಕ್ಷ್ಯ ಧೋರಣೆಯನ್ನು ಹೊಂದಿದ್ದಾರೆ. ಹಾಗೂ ಮತ್ತೊಬ್ಬನ ಸಂತೋಷದಲ್ಲಿ ನನ್ನ ಸಂತೋಷವಿದೆ. ಮತ್ತೊಬ್ಬನ ಸುಖದಲ್ಲಿ ತನ್ನ ಸುಖವಿದೆ ಎನ್ನುವ ಮನೋಭಾವನೆಯನ್ನು ಇವರು ಹೊಂದಿದ್ದರು.

ಸ್ವಾತಂತ್ರ್ಯ ಪೂರ್ವದಲ್ಲಿ ಯಾರಾದರೂ ಗಂಡಸರು ಜೈಲಿಗೆ ಹೋದರೆ ಅವರ ಮನೆಗೆ ಒಂದೆರಡು ಮೂಟೆ ರಾಗಿನೊ, ಅಕ್ಕಿನೊ ಹಾಕಿಬಿಡುತ್ತಿದ್ದರು. ಅದು ಅವನ ಕುಟುಂಬಕ್ಕೆ ದಾರಿಯಾಗುತ್ತಿತ್ತು. ಆದರೆ ಈಗ ಗಂಡ ಜೈಲಿಗೆ ಹೋದರೆ ಹೆಂಡತಿ, ಮಕ್ಕಳು ಬೀದಿಗಿಳಿಯಬೇಕಾದ ಪರಿಸ್ಥಿತಿ ಇದೆ. ಜನ ಕ್ರಾಂತಿ ಮಾಡ್ತಾರೆ, ಪ್ರತಿಭಟನೆ ಮಾಡ್ತಾರೆ, ಆಡಳಿತ ವಿರುದ್ಧ ದಂಗೆ ಏಳ್ತಾರೆ, ಎನ್ನುವಂತಹ ಸೂಕ್ಷ್ಮ ವಿಷಯಗಳನ್ನು ಕರೀಂಖಾನರಿಂದ ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸುತ್ತಿದ್ದಾರೆ.

'ನೆಡೆದಾಡುವ ಕಂಪ್ಯೂಟರ್' ಎಂದು ಕರೆಯಲ್ಪಡುವ ಶಾಸ್ತ್ರಿಗಳು ಕಾಳಿಂಗ ಕೃಷ್ಣರ ವಿಶೇಷತೆಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಕಾಳಿಂಗ ಕೃಷ್ಣರಿಗೆ ಯಾವುದಾದರೊಂದು ಘಟನೆಯನ್ನೋ ದಿನಾಂಕವನ್ನೋ ಹೇಳಿದರೆ ಸಾಕು ಉದಾ ೧೯೩೩ರಲ್ಲಿ ಸೂರ್ಯಗ್ರಹಣ ನಡೆಯಿತು ಎಂದು ಆತನ ಕಿವಿಯ ಮೇಲೆ ಹಾಕಿದ ತಕ್ಷಣ ಅದು ಸೆಪ್ಟಂಬರ್ ೪, ೧೯೩೩ ಎಂದು ಹೇಳಿ ಬಿಡುತ್ತಿದ್ದ, ಪ್ರಪಂಚದ ಯಾವುದೇ ಹೆಸರುವಾಸಿಯಾದ ನೆಹರೂ, ಚರ್ಚಿಲ್, ಬರ್ನಾರ್ಡ್‌ಶಾ, ಲಾಲ್‌ಬಹದ್ದೂರ್‌ಶಾಸ್ತ್ರಿ ಮುಂತಾದ ವ್ಯಕ್ತಿಗಳ ಜನ್ಮ ದಿನಾಂಕವನ್ನು ಹೇಳಿ ಬಿಡುತ್ತಿದ್ದರು. ಕಾಳಿಂಗ ಕೃಷ್ಣರು ಗೌಹಾತಿ, ಪಾಟ್ನಾ, ಕೊಳ್ಳೆಗಾಲ, ಗದಗು ಅಥವಾ ಯಾವುದೇ ಊರಿನದ್ದಾದರೂ ತಕ್ಷಣ ಪಿನ್‌ಕೋಡ್ ಹೇಳಬಲ್ಲರು. ಯಾಕೆಂದರೆ ಪಿನ್‌ಕೋಡ್ ಅಲಾಟ್ ಮಾಡುವ ಟೆಕ್ನಿಕ್ ಆತನಿಗೆ ಗೊತ್ತಿತ್ತು. ಇಂತಹ ಮಹಾನ್ ಪ್ರತಿಭಾವಂತ ವ್ಯಕ್ತಿಯನ್ನು ಶಾಸ್ತ್ರಿಗಳು ಇಲ್ಲಿ ಪರಿಚಯಿಸುತ್ತಿದ್ದಾರೆ.

ಕಾಳಿಂಗಕೃಷ್ಣರು ವೇದಿಕ್ ಮ್ಯಾಥ್‌ಮ್ಯಾಟಿಕ್ಸ್ ಬಗ್ಗೆ ಚೆನ್ನಾಗಿ ತಿಳಿದಿದ್ದರು. ಇವರಿಗೆ ಗೊತ್ತಿಲ್ಲದೇ ಇರುವ ವಿಷಯ ಯಾವುದೆಂದು ನಾವು ಹುಡುಕಬೇಕು. ಸಂಗೀತದ ಬಗೆಗೆ, ಖಾಯಿಲೆಯ ಬಗೆಗೆ, ಕೋರ್ಟ್ ಕಛೇರಿ ವಿಷಯಗಳ ಬಗೆಗೆ ಲಾಯರುಗಳಿಗಿಂತ ಹೆಚ್ಚಾಗಿ ತಿಳಿದಿದ್ದರು. ಹೀಗಿದ್ದೆಲ್ಲಾ ಇದು ಕೋಡ್ ಎಂದೆಲ್ಲ ಹೇಳುತ್ತಿದ್ದರು. ಎಲ್ಲಾ ವಿಷಯಗಳಲ್ಲೂ ಆತನಿಗೆ ನಿಷ್ಣಾತತೆಯಿರುತ್ತಿತ್ತು ಎಂದು ಶಾಸ್ತ್ರಿಗಳು ಕಾಳಿಂಗರವರ ಬಗ್ಗೆ ವಿವರಿಸುತ್ತಿದ್ದಾರೆ. ಕಾಳಿಂಗ ಕೃಷ್ಣರಿಗೆ ಜ್ಯೋತಿಷ್ಯವೂ ಗೊತ್ತಿತ್ತು. ಇವರು ಮಕ್ಕಳಿಗೆ ಇಂಗ್ಲೀಷ್ ಗ್ರಾಮರು ಸಹ ಹೇಳಿಕೊಡುತ್ತಿದ್ದರು. ಇವರು ಯಾವುದೇ ವಿಷಯದ ಕುರಿತು ಅಂದಾಜಿನಲ್ಲಿ, ಊಹೆಯ ಮೇಲೆ ಕಲ್ಪನೆಯಲ್ಲಿ ಮಾತನಾಡುತ್ತಿರಲಿಲ್ಲ, ಸುಮಾರು ೫೦ ವರ್ಷಗಳಷ್ಟು ಹಳೆಯದಾದ ಪೇಪರ್‌ಕಟಿಂಗ್ಸ್ ಅವರ ಹತ್ತಿರವಿತ್ತು. ಪ್ರತಿಯೊಂದು ಮಾತಿಗೂ, ಉಕ್ತಿಗಳಿಗೂ ಅಥಾರಿಟೇಟಿವ್ ಆದ ದಾಖಲೆಗಳನ್ನು, ಹೆಸರು, ಪುಟಸಂಖ್ಯೆ, ಪ್ರಕಟಿತ ವರ್ಷಗಳನ್ನು ಹೇಳುತ್ತಿದ್ದರು. ಇವರಿಗೆ ಜ್ಞಾನದಷ್ಟೇ ವಿನಯವೂ ಇರುತ್ತಿತ್ತು. ಇವರು ತಾನು ಸಾಯುವ ದಿನವನ್ನೂ ಬರೆದಿಟ್ಟಿದ್ದರು ಎಂದು ಕೆಲ ಸ್ನೇಹಿತರಿಂದ ತಿಳಿದುಬಂದಿತೆಂದು, ಅದು ಆತನಿಗಿದ್ದ ಜ್ಯೋತಿಷ್ಯದ ಬಗೆಗಿನ ಜ್ಞಾನವನ್ನು ತೋರಿಸುತ್ತದೆ. ಇಂತಹ ಹಲವಾರು ವಿಶೇಷತೆಗಳನ್ನು ಕಾಳಿಂಗ ಕೃಷ್ಣರು ಹೊಂದಿದ್ದರು ಎಂದು ಶಾಸ್ತ್ರಿಗಳು ತಿಳಿಸುತ್ತಾರೆ.

ಕೃಷ್ಣಶಾಸ್ತ್ರಿಯವರು ತಮ್ಮ ಕೃತಿಯಲ್ಲಿ ಬೈರಪ್ಪನವರ ತೆರೆದ ಮನಸ್ಸಿನ ದಿಟ್ಟತನವನ್ನು ಪರಿಚಯಿಸಿದ್ದಾರೆ. ಸುತ್ತೂರು ಮಠದ ಆಶ್ರಯದಲ್ಲಿ ನಡೆದ ಇಂಟರ್ ಕಾಲೇಜ್ ಡಿಬೆಟ್‌ನಲ್ಲಿ

ನೀಡಿದಂತಹ ತೀರ್ಪು ಬೈರಪ್ಪನವರಿಗೆ ಅಸಮಾಧಾನವನ್ನುಂಟು ಮಾಡಿತ್ತು, ತೀರ್ಪು ನೀಡಿದ ಷಡಕ್ಷರಿ ಮತ್ತು ತು.ಸು.ಶಾಮರಾಯರನ್ನು ನೇರವಾಗಿಯೇ "ನೀವು ಆತ್ಮಪೂರ್ವಕವಾಗಿ ಕೊಟ್ಟಿಲ್ಲ, ನೀವು ಆತ್ಮದ್ರೋಹ ಮಾಡಿಕೊಂಡಿದ್ದೀರಿ"[೧೦] ಎಂದು ನುಡಿದಿದ್ದನ್ನು ಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸಿದ್ದಾರೆ.

ಬೈರಪ್ಪನವರು ರಚಿಸಿದಂತಹ ಪರ್ವ ಕುರಿತು ಅನೇಕ ಟೀಕೆಗಳು ಬಂದಿದ್ದವು ಪುರಾಣವನ್ನು ತಿರುಚಿದ್ದಾರೆ, ನಂಬಿಕೆಗಳನ್ನೆಲ್ಲ ಕೆಡಿಸಿದ್ದಾರೆ. ಇತ್ಯಾದಿಗಳ ಬಗ್ಗೆ ಕೇಳಿದಾಗ "ಯಾವುದು ಸಂಭವನೀಯ, ಯಾವುದು ಅಸಂಭವನೀಯ ಎನ್ನುವುದನ್ನು ತೂಗಿ, ಸಂಭವನೀಯವಾದುದಕ್ಕೆ ಒತ್ತು ಕೊಟ್ಟು ಅಸಂಭವನೀಯವಾದುದಕ್ಕೆ ತೆರೆಮರೆ ಮಾಡಿದ್ದೀರಿ"[೧೧] ಎಂದು ಹೇಳಿದಂತಹ ಶಾಸ್ತ್ರಿಗಳಿಗೆ ಬೈರಪ್ಪನವರು ಸರಿಯಾಗಿ ಯೋಚಿಸಿದ್ದೀರಿ ಎಂಬ ಉತ್ತರವನ್ನು ಕೊಟ್ಟರು.

ನಿಮ್ಮ ಬರಹದ ಮೂಲಕ ಭಾರತೀಯ ಮೌಲ್ಯಗಳಿಗೆ ಚ್ಯುತಿ ತರುವಂಥ ಕೆಲಸ ಮಾಡಿದ್ದೀರಿ ಎಂಬ ಪ್ರಶ್ನೆಗೆ ಬೈರಪ್ಪನವರು ನೀಡಿದಂತ ಪ್ರತಿಕ್ರಿಯೆ ಹೀಗಿದೆ.

"ನಮ್ಮಲ್ಲಿ ಯಾವುದೋ ಕೆಲವು ಸಿದ್ಧಾಂತಗಳನ್ನಿಟ್ಟುಕೊಂಡು, ಅದಕ್ಕೆ ಲೋಪ ಬಂದ ತಕ್ಷಣ ಸಿಡಿಮಿಡಿಗೊಳ್ಳುವ ರೀತಿಯಲ್ಲಿಯೇ ಜನ ಪ್ರತಿಕ್ರಿಯಿಸುತ್ತಾರೆ. ಸ್ವಲ್ಪ ವಿಶಾಲವಾಗಿ ಇನ್ನೊಂದು ದಿಕ್ಕಿನಿಂದ ಯೋಚನೆ ಮಾಡಿದರೆ ಅದಕ್ಕಿಂತ ಉತ್ತಮವಾದುದು ಸಿಗಬಹುದೆಂಬ ಕಲ್ಪನೆ ಕೂಡ ಅವರಲ್ಲಿರುವುದಿಲ್ಲ, ಸ್ಮಂತಿಕೆಯೆಂಬುದೊಂದು ಇರಬೇಕು ಯಾರೋ ಒಬ್ಬರು ಬರೆದಿದ್ದಾರೆ. ಅಂದ್ರೆ ಎಲ್ಲಾ ಕಾಲಕ್ಕೂ ಅದೇ ಇರಬೇಕೆಂದೇನೂ ಇಲ್ಲ. ಅದನ್ನು ಬಿಟ್ಟು ಬಿಡಬೇಕೆಂದೇನೂ ಅಲ್ಲ ಅದರೊಳಗೆ ಬದಲಾವಣೆ ಮಾಡಿಕೊಳ್ಳುವುದಕ್ಕಿಂತ ಅದಕ್ಕಿಂತ ಉತ್ತಮವಾದ ಬೇರ್‍ಯಾವುದೋ ಒಂದು ಬಂದರೆ ಅದನ್ಯಾಕೆ ಸ್ವೀಕರಿಸಬಾರದು ಉದಾ:- ಧರ್ಮರಾಯನಲ್ಲಿರುವಂಥ ವೀಕ್‌ನೆಸ್ ಏನು ಎಂಬುದನ್ನು ಯೋಚನೆ ಮಾಡಿ, ಇವನೊಬ್ಬ ಜೂಜುಕೋರ, ಅದು ಎಷ್ಟರ ಮಟ್ಟಿಗೆಂದರೆ ಯಾರಾದರೂ ಜೂಜಿಗೆ ಬಾ ಎಂದರೆ ಬರುವುದಿಲ್ಲವೆಂದು ಹೇಳುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದ, ಪ್ರತಿಜ್ಞೆ ಮಾಡುವಷ್ಟು ಜೂಜಿನ ಚಟ. ಅವನಿಗಿರುವ ಈ ವೀಕ್‌ನೆಸ್ಸನ್ನೇ ಕಂಡುಕೊಂಡ ದುರ್ಯೋಧನ ಶಕುನಿಯನ್ನು ಬಳಸಿಕೊಂಡು ಮೋಸ ಮಾಡಿದು ಅದು ಗೊತ್ತಿದ್ದು ಇವನು ಸಹಿಸಿಕೊಂಡ, ಮೋಸ ಯಾರೇ ಮಾಡಲಿ, ತಾನು ಮಾಡಲಿ ಬೇರೆಯವರು ಮಾಡಲಿ ಅದನ್ನು ವಿರೋಧಿಸಬೇಕು, ಅದನ್ನು ಧರ್ಮರಾಯ ಮಾಡಲಿಲ್ಲ. ಹೀಗೆ ಹಲವಾರು ಅಂಶಗಳಿಂದ ಕೆಟ್ಟ ಕೆಲಸಗಳಿಗೇ ಅವಕಾಶ ಕೊಟ್ಟಂತಾಗುವುದಿಲ್ಲವೇ ಇಂಥದನ್ನೇ ಪರ್ವದಲ್ಲಿ ಬರೆದರೆ, ನಂಬಿಕೆಗಳನ್ನು ಕೆಡಿಸಿದಿರಿ, ಸಿದ್ಧಾಂತಗಳನ್ನು ಬೇರೆ ಮಾಡಿದಿರಿ ಎಂದು ಭಾವಿಸಿದರೆ ಅದಕ್ಕೆ ಯಾರು ಹೊಣೆ?" ಹೀಗೆ ಬಹಳ ವಿಸ್ತಾರವಾಗಿ ಹೇಳಿದರು. ಬೈರಪ್ಪ ಕೊನೆಗೊಂದು ಮಾರ್ಮಿಕವಾದ ಮಾತು ಹೇಳಿದರು, "ಸ್ವಾಮಿ ಧರ್ಮರಾಯನಂಥ ಜೂಜುಕೋರ ನಿಮಗೆ ಆದರ್ಶವಾಗುವುದಾದರೆ, ನನಗೆ ಕೃಷ್ಣ ಆದರ್ಶ,"[೧೨] ಎಂದು ಹೇಳಿದ್ದನ್ನು ಕೃಷ್ಣಶಾಸ್ತ್ರಿಗಳು ವಿವರವಾಗಿ ವಿಶ್ಲೇಷಿಸಿದ್ದಾರೆ.

ಬೈರಪ್ಪನವರು ತನ್ನನ್ನೇ ತಾನು ವಿಮರ್ಶಿಸಿಕೊಂಡು ನಿಷ್ಕರ್ಷೆಗೆ ಒಳಪಡಿಸಿಕೊಳ್ಳುವ ಗುಣವನ್ನು ಶಾಸ್ತ್ರಿಗಳು ಇಲ್ಲಿ ಗುರ್ತಿಸಿದ್ದಾರೆ.

ಬೈರಪ್ಪನವರು ಇಂಗ್ಲೀಷಿನ ಬಗ್ಗೆ ಹಾಗೂ ಪಟ್ಟಣದವರ ಬಗ್ಗೆ ಹೊಂದಿದಂತಹ ನಿಲುವನ್ನು ಶಾಸ್ತ್ರಿಗಳು ಇಲ್ಲಿ ವ್ಯಕ್ತಪಡಿಸಿದ್ದಾರೆ.

"ಇಂಗ್ಲೀಷನ್ನು ಯಾರು ಬೇಕಾದರೂ ಕಲಿಯಬಹುದು. ಅದೇನು ಬ್ರಹ್ಮ ವಿದ್ಯೆಯಲ್ಲ ಹಾಗೆ ಕಲಿತವರೆಲ್ಲರೂ ಮೇಧಾವಿಗಳಲ್ಲ, ನಿಮಗೆ ಬದುಕಿನ ಅನೇಕ ಅನುಭವಗಳು ಪುಸ್ತಕದಲ್ಲಿರುವ ವಿದ್ಯೆಗಿಂತ ಹೆಚ್ಚಿನದನ್ನು ಕಲಿಸಿಕೊಡುತ್ತದೆ"[೧೩] ಎಂದು ಹಳ್ಳಿಯ ಮಕ್ಕಳನ್ನು ಕುರಿತು ಬೈರಪ್ಪನವರು ಹೇಳಿದಂತಹ ಮಾತುಗಳನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸಿಕೊಳ್ಳುತ್ತಾರೆ.

ಶ್ರೀಯುತರಾದ ಕೃಷ್ಣಶಾಸ್ತ್ರಿಗಳು ಗಾಂಧಿ, ರಮಣಮಹರ್ಷಿ, ರಾನಡೆ, ವಿನೋಬಾ, ಜಿ.ಕೆ,ಮುಂತಾದವರಿಂದ ಪ್ರಭಾವಿತರಾಗಿದ್ದಾರೆ. ಇದಕ್ಕೆ ಪ್ರಮುಖ ಕಾರಣವೇನೆಂದರೆ ಆ ವ್ಯಕ್ತಿಗಳಲ್ಲಿದ್ದಂತಹ ವಿಶೇಷ ಗುಣಗಳು. ಇಂತಹ ಕೆಲವು ಮಹಾನ್ ವ್ಯಕ್ತಿಗಳ ಬಗ್ಗೆ ಶಾಸ್ತ್ರಿಗಳು ತಮ್ಮ ಕೃತಿಯಲ್ಲಿ ಈ ಕೆಳಗಿನಂತೆ ಪರಿಚಯ ಮಾಡಿಕೊಟ್ಟಿದ್ದಾರೆ.

ಗಾಂಧೀಜಿಯವರು ಯಾವುದೇ ಕಾರಣಕ್ಕೂ ತಮ್ಮ ಕಾರ್ಯಕ್ರಮವನ್ನು ಕ್ಯಾನ್ಸಲ್ ಮಾಡುತ್ತಿರಲಿಲ್ಲ. ಹೇಳಿದ ಸಮಯಕ್ಕೆ ಸರಿಯಾಗಿ ಹಾಜರಾಗುವುದು ಅವರ ವ್ಯಕ್ತಿತ್ವದಲ್ಲಿನ ಒಂದು ಉತ್ತಮ ಗುಣವಾಗಿದೆ. ಗಾಂಧೀಜಿಯವರು ಎಂದೂ ಆಡಂಬರವನ್ನು ಇಷ್ಟಪಡುವುದಿಲ್ಲ. ಒಮ್ಮೆ ರೈಲಿನಲ್ಲಿ Ist Class ಬೋಗಿಯಲ್ಲಿ ಬರುತ್ತಾರೆಂದು ಜನರು ನಿರೀಕ್ಷಿಸಿದ್ದರು. ಅದಕ್ಕೆ ಪ್ರತ್ಯುತ್ತರವಾಗಿ ಗಾಂಧಿ ಎರಡನೇ ದರ್ಜೆಯಿಂದ ಇಳಿದು ಬರುತ್ತಿದ್ದರು. ಕಾರಣ ಕೇಳಿದರೆ "ನಾಲ್ಕನೇ ದರ್ಜೆ ಇಲ್ಲ. ಇದ್ದರೆ ಅದಕ್ಕೇ ಬರುತ್ತಿದೆ."[೧೪] ಎಂಬಂತಹ ಉತ್ತರವನ್ನು ನೀಡಿದ ಗಾಂಧಿಯವರ ವ್ಯಕ್ತಿತ್ವದಲ್ಲಿನ ಸರಳತೆಯನ್ನು ಕಾಣಬಹುದಾಗಿದೆ. ಹಾಗೂ ಗಾಂಧಿಯವರು ತಮ್ಮ ಲಗೇಜನ್ನು ತಾವೇ ಹೊರುತ್ತಿದ್ದರು, ಯಾರ ಕೈಗೂ ಕೊಡುತ್ತಿರಲಿಲ್ಲ ಇಂತಹ ಉತ್ತಮವಾದ ವ್ಯಕ್ತಿತ್ವವನ್ನು ಶಾಸ್ತ್ರಿಯವರು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಗಾಂಧಿಯವರಿಗೆ ಒಮ್ಮೆ ಭಾಷಣ ಮಾಡುತ್ತಿರುವ ಸಂದರ್ಭದಲ್ಲಿ ಜನರು ಚಪ್ಪಲಿ ಹಾರ ಹಾಕಲು ಬಂದಿದ್ದನ್ನು, ಅದಕ್ಕೆ ಉತ್ತರವಾಗಿ ಇವರು ತನ್ನ ಎರಡೂ ಚಪ್ಪಲಿಗಳನ್ನು ನೀಡಿದ್ದು ಇಲ್ಲಿ ಗಾಂಧೀಜಿ ಮೂಲಕ ಶಾಸ್ತ್ರಿಗಳು ಜ್ಞಾಪಿಸಿಕೊಳ್ಳುತ್ತಿದ್ದಾರೆ. ಗಾಂಧಿಯವರು "ಚಪ್ಪಲಿ ಹಾಕುವವರದು ಯಾವುದೇ ತಪ್ಪಿಲ್ಲ, ಇಂತವರಿಗೆ ತಿಳಿಯುವಂತೆ ಹೇಳುವ ಶಕ್ತಿ ನಮ್ಮಲ್ಲಿ ಇಲ್ಲದಿರುವುದೇ ನಮ್ಮ ತಪ್ಪು"[೧೫] ಎಂದು ತಿಳಿದಿದ್ದರು. ಜನರಿಗೆ ಬುದ್ಧಿಶಕ್ತಿ ಹೇಳುವ ಶಕ್ತಿ ಬರುವವರೆಗೂ ನಾನು ಚಪ್ಪಲಿ ಹಾಕುವುದಿಲ್ಲ ಎಂದು ಅವರು ಅಂದಿನಿಂದ ಚಪ್ಪಲಿ ಹಾಕಲಿಲ್ಲ. ಗಾಂಧಿಯವರು ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಇವರು ನಾಲ್ಕೈದು ಕೆಲಸಗಳನ್ನು ಒಟ್ಟೊಟ್ಟಿಗೆ ಮಾಡುತ್ತಿದ್ದರು. ಇವರು ದಿನಕ್ಕೆ ಮೂರು ಲಳಿ ನೂಲು ತೆಗೆಯಬೇಕೆಂಬ ಮನೋ ನಿಶ್ಚಯ ಮಾಡಿಕೊಂಡು, ಮೂರು ಲಳಿಯಲ್ಲಿ ಒಂದು ಕಾಂಗ್ರೆಸ್ ಫಂಡಿಗೆ,

ಎರಡನೆಯ ಬಳಿ ಅತಿಥಿ ಸತ್ಕಾರಕ್ಕೆ, ಮೂರನೆಯದು ತನ್ನ ಆ ದಿನದ ನಿರ್ವಹಣೆಗೆ ಬಳಸುತ್ತಿದ್ದರು. ಅವರು ಮೂರರಲ್ಲಿ ಎರಡು ಹಸ್ತ ತೆಗೆಯುತ್ತಿದ್ದದ್ದು ಉಂಟು. ಇವರು ಪ್ರತಿದಿನವೂ ಮೂರಾರಗಿಂತ ಹೆಚ್ಚು ಖರ್ಚು ಮಾಡುತ್ತಿರಲಿಲ್ಲ. ಇದರಂತೆಯೇ ಇವರ ಹೆಂಡತಿಯಾದ ಕಸ್ತೂರಿಬಾರವರು ಸಹ ಮೂರು ಆಣೆಯಲ್ಲಿ ಒಂದನ್ನು ದಾನಿ ಮೂರಾಣೆ ತರಬೇಕಿತ್ತು. ಗಾಂಧೀಜಿಯವರ ಊಟದ ಕ್ರಮ ಕೂಡ ವಿಶಿಷ್ಟವಾಗಿತ್ತು ಎಂಬುದನ್ನು ಶಾಸ್ತ್ರಿಗಳು ಇಲ್ಲಿ ವಿವರವಾಗಿ ತಿಳಿಯಪಡಿಸುತ್ತಿದ್ದಾರೆ. ಗಾಂಧಿಯವರನ್ನು ಭೇಟಿ ಮಾಡಲು ಬಂದವರಿಗೆ ಕಾಗದದ ಚೀಟಿಯನ್ನು ಕೊಟ್ಟು ಅವರ ಹೆಸರು, ಊರು, ಮತ್ತು ಬಂದ ಕಾರಣವನ್ನು ಬರೆಯಲು ಹೇಳುತ್ತಿದ್ದರು. ಆ ಕಾಗದ ಎಂಥದ್ದು ಎನ್ನುವುದೂ ಒಂದು ವಿಶೇಷವೇ, ಅದು ಆಗಲೇ ಉಪಯೋಗಿಸಿದ ಕಾಗದ, ಅದರ ಒಂದು ಪಕ್ಕದಲ್ಲಿ ಬರೆದಿದ್ದು ಮತ್ತೊಂದು ಪಕ್ಕ ಖಾಲಿ ಇದ್ದರೆ ಅದನ್ನೇ ಕತ್ತರಿಸಿ ಇಟ್ಟುಕೊಳ್ಳಲಾಗುತ್ತಿತ್ತು. ಹಾಗೂ ಕೇಳಿದರೆ ಭಾರತ ಬಡದೇಶ ಎಂಬ ಉತ್ತರವನ್ನು ನೀಡುತ್ತಿದ್ದರು. ಇವರು ಕೇವಲ ಅರ್ಧಗಂಟೆ ಕಾಲಾವಕಾಶ ನಿದ್ದೆ ಮಾಡುತ್ತಿದ್ದರು. ಎಂದೂ ಅರ್ಧಗಂಟೆಗಿಂತ ಒಂದು ನಿಮಿಷವೂ ಹೆಚ್ಚಿಗೆ ನಿದ್ದೆ ಮಾಡಿಲ್ಲ. ಇದರಿಂದಾಗಿ ಅವರು ದೇಹ ಮತ್ತು ಮನಸ್ಸನ್ನು ಫ್ರೆಶ್‌ಅಪ್ ಮಾಡಿಕೊಳ್ಳುತ್ತಿದ್ದರು.

ಒಮ್ಮೆ ಗಾಂಧಿಯವರಿಗೆ ಸೇಬು ಹಣ್ಣನ್ನು ತಿನ್ನಲು ನೀಡಿದಾಗ, ಅವರು ಸಿಟ್ಟಿನಿಂದ ಒಬ್ಬ ಬಡ ಮನುಷ್ಯ ಸೇಬನ್ನು ಕೊಂಡು ತಿನ್ನಬಲ್ಲನೇ ಎಂಬ ಉತ್ತರವನ್ನು ನೀಡಿದ್ದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಾ ಹೋಗುತ್ತಾರೆ.

"ವ್ಯಕ್ತಿ ಯಾರೇ ಆಗಿರಲಿ ತನ್ನ ಬೆವರು ಸುರಿಸಿ ದುಡಿದು ತಿನ್ನಬೇಕು" ಎಂದು ಉಪನಿಷತ್ತುಗಳು ಹೇಳುತ್ತವೆ," ಎನ್ನುವಂತಹ ವಿಶೇಷತೆಯನ್ನು ಬಿತ್ತಲು ಗಾಂಧೀಜಿಯವರು ಪ್ರಯತ್ನಿಸುತ್ತಿರುವುದನ್ನು ಶಾಸ್ತ್ರಿಗಳು ಇಲ್ಲಿ ಗುರ್ತಿಸಿದ್ದಾರೆ.

ಇವರನ್ನು ನೋಡಲು ಬಂದಂತಹ ಬಹುಪಾಲು ಜನ ತುಂಬಾ ಸಾಮಾನ್ಯ ವ್ಯಕ್ತಿಗಳಂತೆ ವರ್ತಿಸುತ್ತಿದ್ದರು. ಗಾಂಧೀಜಿಯವರನ್ನು ತುಂಬಾ ಹತ್ತಿರದಿಂದ ನೋಡುವ, ಅವರೊಟ್ಟಿಗೆ ಸ್ವಲ್ಪ ದಿನಗಳು ಇರುವ ಅವಕಾಶ ಒದಗಿ ಬಂದದ್ದು ನನ್ನ ಪಾಲಿನ ಪುಣ್ಯ ಎಂದು ಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

ಜಿಡ್ಡು ಕೃಷ್ಣಮೂರ್ತಿ, ಭಾರತದ ತತ್ವಶಾಸ್ತ್ರ ಸಂದರ್ಭದಲ್ಲಿ ಬಹುದೊಡ್ಡ ಹೆಸರು ಅಷ್ಟೇ ಅಲ್ಲ, ಪ್ರಪಂಚದ ಚಿಂತನಕಾರರಲ್ಲಿ ಒಬ್ಬರೆಂದು ಪರಿಗಣಿಸಲ್ಪಟ್ಟಿದ್ದಾರೆ. ಇವರು ಥಿಯಾಸಫಿಕಲ್ ಸೊಸೈಟಿಯ ಮೂಲಕ ಎಲ್ಲ ಕಡೆ ಪರಿಚಿತರು. ಇಂತಹ ಕೃಷ್ಣಮೂರ್ತಿಯವರ ಬಗ್ಗೆ ಶಾಸ್ತ್ರಿಗಳು ಇಲ್ಲಿ ಪರಿಚಯಿಸುತ್ತಿದ್ದಾರೆ.

ಇಂಡಿಯಾ ದೇಶದ ಥಿಯಾಸಾಫಿಕಲ್ ಸೊಸೈಟಿಯ ಸ್ಥಾಪಕರಾದ ಅನಿಬೆಸೆಂಟ್ ರವರು ಕೃಷ್ಣಮೂರ್ತಿಯವರನ್ನು ಕಂಡು ಇವನ ತಲೆಯ ಹಿಂದೆ ಕಿರಣಗಳ ಪ್ರಭಾವಳಿ ಕಾಣಿಸುತ್ತದೆ. ಇವನು

ವಿಶೇಷ ಹುಡುಗ ಎಂದು ಭಾವಿಸಿ ಇವರಿಗೆ ಆಕ್ಸ್‌ಫರ್ಡ್ ಯೂನಿವರ್ಸಿಟಿಯಲ್ಲಿ ವಿದ್ಯಾಭ್ಯಾಸ ಮಾಡಿಸುತ್ತಾರೆ. ಜೊತೆಜೊತೆಗೆ ಥಿಯಾಸಫಿಕಲ್ ವಿಚಾರಗಳನ್ನು ಬೋಧಿಸುತ್ತಾರೆ.

ಕೃಷ್ಣಮೂರ್ತಿಯವರು ಎತ್ತರದ ವ್ಯಕ್ತಿತ್ವ, ನೀಳವಾದ ಮುಖ, ವಿಶಾಲವಾದ ಹಣೆ, ಹಿಂದಕ್ಕೆ ಬಾಚಿದ ಕ್ರಾಪು, ಜುಬ್ಬ, ಕಚ್ಚೆ ಪಂಚೆ ಮತ್ತು ಪಂಪ್ ಷೂಸ್ ಹಾಕುತ್ತಿದ್ದರು. ಇವರಿಗೆ ಯಾವುದೇ ಚರ್ಚೆಯ ಸಂದರ್ಭದಲ್ಲಿ ನಗುವವರನ್ನು ಕಂಡರೆ ಆಗುವುದಿಲ್ಲ. ಆಗಿಂದಾಗಲೇ ನಗುವವರನ್ನು ಬೈಯ್ಯುತ್ತಿದ್ದರು.ಇವರ ವಿಚಾರವನ್ನು ಬುದ್ಧಿಪೂರ್ವಕವಾಗಿ ತೆಗೆದುಕೊಳ್ಳದೆ ಹೃದಯಪೂರ್ವಕವಾಗಿ ಗ್ರಹಿಸಬೇಕು. ಅವರು ಬಳಸುತ್ತಿದ್ದ ಭಾಷೆ ಕೂಡ ಸಾಮಾನ್ಯವಾಗಿ ಇಂಗ್ಲೀಷ್ ಬಲ್ಲವರೂ ಅರ್ಥಮಾಡಿಕೊಳ್ಳಬಹುದಾದ ಸಿಂಪ್ಲೆಸ್ಟ್ ಲಾಂಗ್ವೇಜ್ ಆಗಿತ್ತು. ಕೃಷ್ಣಮೂರ್ತಿಯವರ ಒಟ್ಟು ಭಾಷಣಗಳ ಸಾರ 'ಬಿಯಾನ್‌ಇಂಡಿಪೆಂಡೆಂಟ್ ಮ್ಯಾನ್,' ಇಂಡಿಪೆಂಡೆಂಟ್ ಎಂದರೆ ಇನ್ನೊಬ್ಬರ ಅಭಿಪ್ರಾಯಕ್ಕೆ ನೀನು ಒಳಗಾಗಬೇಡ, ಆಧ್ಯಾತ್ಮ, ನಿತ್ಯ ಜೀವನ ಯಾವುದೇ ಆಗಿರಲಿ, ಅವರು ಹೇಳಿದರೆಂಬ ಮಾತ್ರಕ್ಕೆ ನೀನು ಒಪ್ಪಬೇಡ.

Think, Think and Think
Think again, again and again
Think deep, deep and deep
and come to your own conclusion
and act according to your conclusion

ಇದೇ ಅವರ ಒಟ್ಟು ಚಿಂತನೆಯ ಸಾರಾಂಶ[೭] ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸುತ್ತಿದ್ದಾರೆ.

ಕೃಷ್ಣ ಮೂರ್ತಿಗಳು ಹಿಂದೂ, ಮುಸ್ಲಿಂ ಎಂಬುದರ ಬಗ್ಗೆ ತಮ್ಮದೇ ಆದಂತಹ ನಿಲುವನ್ನು ಹೊಂದಿದ್ದರು. ಮಸೀದಿಗೆ ಹೋಗುತ್ತಾನೆಂಬ ಕಾರಣಕ್ಕೆ ಮುಸ್ಲಿಂ ಎಂತಲೂ, ದೇವಸ್ಥಾನಕ್ಕೆ ಹೋಗುವ ಕಾರಣ ಹಿಂದೂವೆಂತಲೂ ಕರೆಯುವುದನ್ನು ಅಲ್ಲಗಳೆಯುತ್ತಾರೆ. ಒಬ್ಬ ಮನುಷ್ಯನನ್ನು ಮನುಷ್ಯನ ಹಾಗೆ ನೋಡಬೇಕು. ನಿರ್ಮಲ ಹೃದಯದ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಶತ್ರುವೆಂದು ಬಗೆಯಲಾರ[೮] ಎನ್ನುವಂತ ಧೋರಣೆಯನ್ನು ಹೊಂದಿದ್ದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

ಕೃಷ್ಣಮೂರ್ತಿಯವರು ರಾಜಕಾರಣವನ್ನು ಹೊಲಸು ರಾಜಕಾರಣ ಎಂದು ಭಾವಿಸಿದ್ದರು. ತಂದೆಯು ಕಷ್ಟಪಟ್ಟು ಅಪಾರವಾಗಿ ಮಾಡಿದಂತಹ ಆಸ್ತಿಯನ್ನು ಅನುಭವಿಸದೇ ಒಂದು ದಿನ ಸತ್ತ ಮೇಲೆ ಆ ಎಲ್ಲಾ ಆಸ್ತಿಯನ್ನು ಮಗ ತನ್ನದೆಂದು ಹೇಳುವುದನ್ನು ಕೃಷ್ಣಮೂರ್ತಿಗಳು ವಿರೋಧಿಸುತ್ತಾರೆ. ಇದು ಸಹಜವಾದುದಲ್ಲ ಬೇರೊಬ್ಬ ಕಷ್ಟಪಟ್ಟು ಸಂಪಾದಿಸಿದ ಆಸ್ತಿಗೆ, ಏನೂ ಕಷ್ಟಪಟ್ಟು ಸಂಪಾದಿಸದವನನ್ನು ಒಡೆಯನನ್ನಾಗಿ ಮಾಡುವ ಕಾನೂನನ್ನು ಇವರು ಕಿಂಚಿತ್ ಒಪ್ಪುವುದಿಲ್ಲ. ಆದರೆ ನೈತಿಕವಾಗಿ ಆ, ಆಸ್ತಿಗೆ ಕಿಂಚಿತ್ ಕೂಡ ಬೆವರು ಸುರಿಸಿ ಸಂಪಾದಿಸದ ಆತ ಒಡೆಯನಾಗಬಲ್ಲನೇ? ಎಂಬುದಾಗಿ ಹೇಳುವಂತಹ ವ್ಯಕ್ತಿತ್ವವನ್ನೂ, ವಿಶೇಷತೆಯನ್ನು ಕೃಷ್ಣಮೂರ್ತಿಯವರಲ್ಲಿ ಶಾಸ್ತ್ರಿಗಳು ಕಂಡಿದ್ದಾರೆ.

ಜಿಡ್ಡು ಕೃಷ್ಣಮೂರ್ತಿಯವರು 'ಲವ್' ಎಂಬುದನ್ನು ಕೇವಲ 'ಬಿಝಿನೆಸ್' ಎಂಬುದಾಗಿ ಹೇಳುತ್ತಾರೆ. ತನ್ನ ಗಂಡನಿಗೆ ಹೆಂಡತಿಯು ಮನೆನೋಡ್ಕೋತ್ತಾಳೆ. ಊಟ ಹಾಕ್ತಾಳೆ, ಜೊತೇಲಿ ಮಲಗ್ತಾಳೆ ಎಂಬ ಕಾರಣಕ್ಕೆ ಗಂಡ ಹೆಂಡತಿಯನ್ನು ಪ್ರೀತಿಸುತ್ತಾನೆ. ಆದ್ದರಿಂದ ಅದು ಬಿಝಿನೆಸ್ ಎಂದು ಹೇಳುತ್ತಾರೆ, ಪ್ರೀತಿ ಎಂದರೆ ಕಂಡೀಷನ್ ಅಲ್ಲ, ಚಂದ್ರ ಬೆಳದಿಂಗಳು ಕೊಡ್ತಾನೆ ನಾನು ಬೆಳದಿಂಗಳು ಕೊಡ್ತಿದೀನಿ ನೋಡು ಎಂದು ಯಾವತ್ತು ಬಗೆಯುವುದಿಲ್ಲ. ಸೂರ್ಯ ಬೆಳಕು ಕೊಡುತ್ತಾನೆ. ಹಕ್ಕಿಗಳು ಇಂಪಾಗಿ ಹಾಡುತ್ತವೆ. ನದಿ ಹರಿಯುತ್ತೆ, ಗಾಳಿ ತಂಪಾಗಿ ಬೀಸುತ್ತದೆ ಅದರ ಪಾಡಿಗದು ಬೀಸುತ್ತಲೇ ಇರುತ್ತದೆ. ಇವು ನಮ್ಮ ಮೇಲೆ ಯಾವುದೇ ಕಂಡೀಷನ್ ಹಾಕಲ್ಲ[೬೯] ಎಂಬುದಾಗಿ ಕೃಷ್ಣಮೂರ್ತಿಯವರ ಲವ್ ಬಗ್ಗೆ ವಿಶ್ಲೇಷಿಸಿದ್ದಾರೆ.

ಒಂದು ಹೂ ನೋಡು ಅದು ನಮ್ಮ ಜೊತೆಗೆ ಯಾವುದೇ ಕಂಡೀಷನ್ ಹಾಕಲ್ಲ ಆದ್ದರಿಂದ ಯಾವುದನ್ನು ಕಂಡೀಷನ್ ಇಲ್ಲದೆ ಮೆಚ್ಚುತ್ತೇವೆಯೋ, ಖುಷಿ ಪಡುತ್ತೇವೆಯೋ ಅದೇ ಪ್ರೀತಿ ಎಂದು ಹೇಳುವುದನ್ನು ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸಿದ್ದಾರೆ.

ಕೃಷ್ಣಶಾಸ್ತ್ರಿಗಳಿಗೆ ಮಾನಸಿಕ ಪ್ರಶಾಂತಿ ಸಿಕ್ಕಿದುದು ರಮಣಾಶ್ರಮದಲ್ಲಿ ಇಂತಹ ರಮಣರ ಬಗ್ಗೆ, ಅವರಲ್ಲಿರುವ ವಿಶೇಷತೆಯನ್ನು ಇಲ್ಲಿ ಚರ್ಚಿಸಲಾಗಿದೆ. ರಮಣರು ಶರೀರ ಬೇರೆ ಅಲ್ಲ, ನಾನು ಬೇರೆ ಅಲ್ಲ ಎಂಬ ಭಾವನೆ ಹೊಂದಿದ್ದರು. ನಾನು ಯಾರೆಂಬುದು ಎಂಬ ತತ್ವವೇ ರಮಣರ ಪ್ರಮುಖ ವಿಚಾರವಾಗಿತ್ತು. ಸಾವಿರ ವಿಚಾರದಲ್ಲಿ ಹೇಳಲಿ, ಸಾವಿರ ವಿಧಾನದಲ್ಲಿ ಹೇಳಲಿ, ಸಹಸ್ರ ಶಬ್ದಗಳಲ್ಲಿ ಹೇಳಲಿ, ಸಹಸ್ರ ಜನರ ಹತ್ತಿರ ಮಾತನಾಡುವಾಗ ಹೇಳಲಿ, ಅದರ ಸೂತ್ರ ಏನೆಂದರೆ 'ನಾನು ಯಾರು' ಎಂಬುದು ಅದೊಂದು ರೀತಿಯಲ್ಲಿ ಮಧ್ಯಬಿಂದು ರಮಣರ ಮೂಲತತ್ವ ಸರ್ವಸ್ವಸಾರ[೭೦] ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸಿದ್ದಾರೆ.



ಭಾರತ ದೇಶ ಆಧ್ಯಾತ್ಮಿಕ ಭೂಮಿ ಇಲ್ಲಿ ಆಧ್ಯಾತ್ಮಿಕ ನೆಲೆಗಟ್ಟಿದೆ, ಇಲ್ಲಿ ಯಾವುದನ್ನೇ ಆದರೂ ಅರ್ಥಮಾಡಿಕೊಳ್ಳಬೇಕಾದರೆ ಆಧ್ಯಾತ್ಮದ ಪರಿಚಯವಾಗಬೇಕು. ಅದಕ್ಕಾಗಿ ಆಧ್ಯಾತ್ಮದ ಬಗ್ಗೆ ಭಾರತದ ಬಗ್ಗೆ ತಿಳಿದುಕೊಳ್ಳಲು ಆಧ್ಯಾತ್ಮಿಕ ವ್ಯಕ್ತಿಗಳ ಪರಿಚಯ ಅವಶ್ಯಕ ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ. ಆಧ್ಯಾತ್ಮಿಗಳೆಂದರೆ ಬಿಕ್ಷುಕರಲ್ಲ, ನಿಜವಾದ ಆಧ್ಯಾತ್ಮಿಗಳ ದರ್ಶನದಿಂದ ಆನಂದ, ಮೂಡುವ ಪ್ರಜ್ಞೆ, ಹೊಳೆಯುವ ಹೊಳೆಹು ಸಿಗುತ್ತದೆ. ಇವುಗಳು ಬೇರೆ ಕಡೆ ಸಿಗುವುದಿಲ್ಲ. ಬ್ರಂಟನ್ ಇವರು ಇಂಗ್ಲೆಂಡಿನಲ್ಲಿರುವವರು, ಪ್ರಪಂಚ ಪರ್ಯಟನೆ ಮಾಡುತ್ತಾ ಬಂದವರು ಇವರು ರಮಣ ಮಹರ್ಷಿಗಳಿಂದ ಪ್ರಭಾವಿತರಾಗಿದ್ದರು. ಬ್ರಂಟನ್ ತಾನು ನೋಡಿದ್ದ ಎಲ್ಲಾ ದೇಶಗಳು ಮತ್ತು ದೊಡ್ಡ ನಗರಗಳನ್ನು ತನ್ನ ಅಂತರ್ಮುಖದಿಂದ ಕಾಣುತ್ತಾರೆ. ಎಲ್ಲವೂ ಬಾಂಬುಗಳಿಂದ, ಉಜ್ವಲವಾದ ಬೆಂಕಿಯಿಂದ, ರಸ್ತೆಗಳಲ್ಲಿ ಹರಿಯುವ ರಕ್ತದ ಕೋಡಿಗಳಿಂದ ಜನರ ಚೀತ್ಕಾರದಿಂದ ತುಂಬಿರುವುದನ್ನು ರಮಣ ಮಹರ್ಷಿಗಳ ಮೂಲಕ ಕಾಣುತ್ತಾರೆ. ಇಂತಹ ಅಮೋಘ ಆಧ್ಯಾತ್ಮ ಶಕ್ತಿಯನ್ನು ರಮಣ ಮಹರ್ಷಿಗಳು ಹೊಂದಿದ್ದರು ಎಂದು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ.

ರಮಣಮಹರ್ಷಿಯನ್ನು ಕುರಿತು 'ಹಂಪ್ರಿಸ್' ಎನ್ನುವ ಜರ್ಮನಿಯವನು ಎ ಮೆಸೇಜ್ ಆಫ್ ಅರುಣಗಿರಿ ಎಂಬ ಪುಸ್ತಕದಲ್ಲಿ ಬರೆಯುತ್ತಾನೆ. "His body was eaten away to the bone" ಹಾಗೆ ಶರೀರವನ್ನು ತಿಂದು ಹಾಕಿದರೂ ಕುಳಿತಿರುವಂಥ ಬಾಹ್ಯ ಪ್ರಜ್ಞೆ ಇಲ್ಲದೆ ಕುಳಿತಿರಬೇಕಾದರೆ ಇವನು ಯಾರೋ ಆತ್ಮಜ್ಞಾನಿಯಿರಬೇಕೆಂದು ಯೋಚಿಸುತ್ತಾರೆ. ರಮಣ ಮಹರ್ಷಿಗಳು ತಿರುವಣ್ಣಾಮಲೆಯ ಬೆಟ್ಟದ ಮೇಲೆ ಇರುತ್ತಿದ್ದಂತಹ ಸಂದರ್ಭದಲ್ಲಿ ಅವರ ಸುತ್ತಲೂ ಸರ್ಪಗಳು ಓಡಾಡುತ್ತಿದ್ದವು. ಇವುಗಳು ಕಚ್ಚಬಹುದಲ್ಲವೇ ಎಂಬ ಪ್ರಶ್ನೆಗೆ ಅವರು "ಅದರ ಜಾಗಕ್ಕೆ ನಾವು ಬಂದಿದೀವಿ. ತೊಂದರೆಯಾದರೆ ಅದಕ್ಕಾಗಬೇಕೇ ವಿನಃ ನಮಗಲ್ಲ"[೨೧] ಎಂದು ಹೇಳುತ್ತಾರೆ. ಇಂತಹ ಅದ್ಭುತವಾದ ಆಧ್ಯಾತ್ಮಿಕ ವಿಶೇಷತೆಯನ್ನು ಹೊಂದಿರುವ ರಮಣ ಮಹರ್ಷಿಗಳ ಬಗ್ಗೆ ಕೃಷ್ಣಶಾಸ್ತ್ರಿಗಳು ಇಲ್ಲಿ ವಿವರವಾಗಿ ತಿಳಿಯಪಡಿಸಿದ್ದಾರೆ.

ಒಟ್ಟಾರೆಯಾಗಿ ಶ್ರೀಯುತ ಬೆಳಗೆರೆ ಕೃಷ್ಣಾಶಾಸ್ತ್ರಿಯವರ ಮರೆಯಲಾದೀತೇ ಕೃತಿಯು ತಿಳಿವಿನ ಅನುಭವಕ್ಕೆ ಮಾತುಗಳ ಮೂಲಕ ವ್ಯಕ್ತಿಗಳ ಬಗ್ಗೆ ತಿಳಿಯಪಡಿಸಿದ್ದಾರೆ. ಇಲ್ಲಿ ರೂಪು ತಳೆದ ಹಲವಾರು ವ್ಯಕ್ತಿ ಚಿತ್ರಗಳು ಶಾಸ್ತ್ರಿಗಳ ಸೂಕ್ಷ್ಮ ಅವಲೋಕನದ ಭಾಗವಾಗಿಯೇ ಮೈತಳೆದು ಬಂದಂತವು ಇವುಗಳು ನೆನಪಿನ ಭಾಗಗಳೆಂಬಂತೆ ಆಗದೆ ಅರಿವಿನ ರೂಪಕಗಳಾಗಿ ಹೊಸ ಅನುಭವ ಸಾಧ್ಯತೆಯನ್ನು ಓದುಗರಲ್ಲಿ ಹುಟ್ಟಿಸುತ್ತವೆ. ಗ್ರಾಮೀಣ ಪ್ರತಿಭೆಗಳು, ಸಮಾಜಸೇವಾ ಬಂಧುಗಳು, ಆಧ್ಯಾತ್ಮಿಕ ಸಾಧಕರು, ಸಾಹಿತಿಗಳೊಂದಿಗಿನ ಒಡನಾಟದ ನೆನಪುಗಳನ್ನು ಶಾಸ್ತ್ರಿಗಳು ವಿವರಣಾತ್ಮಕವಾಗಿ ಹಾಗೂ ವಿಶ್ಲೇಷಣಾತ್ಮಕವಾಗಿಯೂ ತಮ್ಮ ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ.

## ಅಡಿಟಿಪ್ಪಣಿ

೦೧. ಮರೆಯಲ್ಪಾದೀತೇ, ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಪುಟ-೬
೦೨. ಅದೇ, ಪುಟ- ೭
೦೩. ಅದೇ, ಪುಟ- ೩೩
೦೪. ಅದೇ, ಪುಟ- ೪೩
೦೫. ಅದೇ, ಪುಟ- ೪೪
೦೬. ಸಂದರ್ಶನದಿಂದ ಪಡೆದ ಮಾಹಿತಿ ಹಾಗೂ ಮರೆಯಲಾದೀತೇ, ಪುಟ-೫೭,೫೮
೦೭. ಅದೇ, ಪುಟ- ೧೫೦
೦೮. ಅದೇ, ಪುಟ- ೧೫೮
೦೯. ಅದೇ, ಪುಟ- ೨೨೪
೧೦. ಅದೇ, ಪುಟ- ೨೨೮
೧೧. ಅದೇ, ಪುಟ- ೨೨೯
೧೨. ಅದೇ, ಪುಟ- ೨೫೩
೧೩. ಅದೇ, ಪುಟ- ೨೭೪
೧೪. ಅದೇ, ಪುಟ- ೨೭೬
೧೫. ಅದೇ, ಪುಟ- ೨೮೧
೧೬. ಅದೇ, ಪುಟ- ೩೧೮, ೩೧೯
೧೭. ಅದೇ, ಪುಟ- ೩೧೯
೧೮. ಅದೇ, ಪುಟ- ೩೨೫
೧೯. ಅದೇ, ಪುಟ-
೨೦. ಅದೇ, ಪುಟ- ೩೦೫

## ೩.೪ ಎಲೆ ಮರೆಯ ಅಲರು

ಬೆಳಗೆರೆ ಕೃಷ್ಣಶಾಸ್ತ್ರಿಯವರು ನೆನಪುಗಳು ಅಕ್ಷಯಪಾತ್ರೆ ಇದ್ದಂತೆ. ಇವರ ಮರೆಯಲಾದೀತೇ ಕೃತಿಯಲ್ಲಿ ಗ್ರಾಮೀಣ ಪ್ರತಿಭೆಗಳು, ಸಮಾಜ ಸೇವಾ ಬಂಧುಗಳು, ಆಧ್ಯಾತ್ಮಿಕ ಸಾಧಕರು, ಸಾಹಿತಿಗಳೊಂದಿಗಿನ ಒಡನಾಟದ ನೆನಪುಗಳನ್ನು ಮಾಡಿಕೊಳ್ಳುತ್ತಾರೆ. ಈ ಕೃತಿಯಂತೇ, ಮುಂದುವರಿದ ಭಾಗವಾಗಿ ಅವರ ಎಲೆಮರೆಯ ಅಲರು ನೆನಪುಗಳನ್ನು ಬಿಚ್ಚಿಡುತ್ತಿದೆ. ಈ ಕೃತಿಯಲ್ಲಿರುವುದು ಕೇವಲ ಶಾಸ್ತ್ರಿಯವರ ನೆನಪುಗಳಲ್ಲ, ಒಂದು ಜನಾಂಗದ ಸಮಾಜದ ಜೀವನ ಕ್ರಮಗಳು ಆದ್ದರಿಂದಲೇ ಕೃತಿಯಲ್ಲಿರುವ ವ್ಯಕ್ತಿಗಳಿಗೆ ಮಹತ್ವದ ಸ್ಥಾನವಿದೆ. ಇವ್ಯಾವು ರೂಢಿಗತ ಚರಿತ್ರೆಯ ಪಠ್ಯಗಳಲ್ಲ ಇಸವಿಗಳ ಮಧ್ಯೆ ಕುಳಿತ ಸಂಗತಿಗಳಲ್ಲ ಅಧಿಕೃತತೆ, ಆಧಾರಗಳ ಹಂಗು ಇವುಗಳಿಗಿಲ್ಲ. ಕಾಲವನ್ನು ಜಡತ್ವವನ್ನು, ಮೀರುವ, ಮೀರುತ್ತಲೇ ಹೊಸ ಜಗತ್ತಿನ ಕಡೆಗೆ ಚಲಿಸಬಲ್ಲ ಬರಹಗಳಾಗಿವೆ. ಇಲ್ಲಿ ಕ್ಲಿಷ್ಟತೆಗಿಂತ ಸರಳತೆ, ಅಧಿಕೃತತೆಗಿಂತ ನಂಬಿಕೆ, ವೈಚಾರಿಕತೆಗಿಂತ ಅನುಭೂತಿ ಮುಖ್ಯವಾಗುತ್ತದೆ. ತನ್ನ ನೆಲೆಯಿಂದಲೇ ಬದುಕನ್ನು, ಬದುಕಿನ ಔನ್ನತ್ಯವನ್ನು ಕಂಡುಕೊಳ್ಳುತ್ತಾ ತನ್ನದೇ ಜಗತ್ತಿನ ಸತ್ಯಗಳನ್ನು, ಸತ್ವಗಳನ್ನು, ಮೌಲ್ಯಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತವೆ.

ಕೃಷ್ಣಶಾಸ್ತ್ರಿಯವರು ಅಪೂರ್ವ ಸ್ಮೃತಿಕೋಶದ ನೆನಪುಗಳನ್ನು ಈ ಕೃತಿಯ ಮೂಲಕ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ.

ಶಾಸ್ತ್ರಿಯವರು ತಮ್ಮ ಕೃತಿ ಎಲೆಮರೆಯ ಅಲರುವಿನಲ್ಲಿ ಇರುವಂತಹ ವ್ಯಕ್ತಿಗಳಲ್ಲಿನ ವಿಶೇಷತೆಯನ್ನು ಯಾವ ರೀತಿ ಗುರ್ತಿಸಿದ್ದಾರೆ, ಹಾಗೂ ಅವರುಗಳು ಕನ್ನಡ ಸಾಹಿತ್ಯಕ್ಕೆ ಹಾಗೂ ಸಾಂಸ್ಕೃತಿಕ ಲೋಕಕ್ಕೆ ಅಥವಾ ಸಮಾಜಕ್ಕೆ ಯಾವ ರೀತಿಯ ಕೊಡುಗೆಯನ್ನು ನೀಡಿದ್ದಾರೆ ಎಂಬುದನ್ನು ತಿಳಿಯಬಹುದು. ಈ ಕೃತಿಯು ೧೯ ಚಿಕ್ಕ ನೆನಪುಗಳನ್ನು ಒಳಗೊಂಡಿದ್ದು, ಪ್ರತಿಯೊಂದು ತನ್ನದೇ ಆದಂತಹ ವಿಶೇಷತೆಯನ್ನು ಹೊಂದಿರುವುದಾಗಿ ಶಾಸ್ತ್ರಿಯವರು ಅಭಿಪ್ರಾಯ ಪಡುತ್ತಾರೆ. ಈ ಕೃತಿಯ ಮೊದಲ ನೆನಪಿನ ದಾಖಲೆ ಸ್ವಿಮ್ಮಿಂಗ್ ನಾರಾಯಣರಾವ್ ಅವರದ್ದು.

### ಸ್ವಿಮ್ಮಿಂಗ್ ನಾರಾಯಣರಾವ್

ರಮಣಶ್ರೀರವರ ಆರಾಧಕರಾಗಿದ್ದ "ಸ್ವಿಮ್ಮಿಂಗ್ ನಾರಾಯಣರಾವ್" ಸ್ವಿಮ್ಮಿಂಗ್ ಪೂಲ್‌ನಲ್ಲಿ ಎಕ್ಸ್‌ಪರ್ಟ್ ಟೀಚರ್ ಆಗಿದ್ದರು. ಇಂದಿನ ಕಾಲದಲ್ಲಿ ಸಂಬಂಧಿಕರಿಗೆರ, ಅಣ್ಣತಮ್ಮಂದಿರಿಗೆ, ತಂದೆತಾಯಿ, ಸ್ನೇಹಿತರುಗಳಿಗೂ ಕೂಡ ಯಾವುದೇ ರೀತಿಯ ಉಪಚಾರವನ್ನು ಮಾಡುವುದು ಅಪರೂಪ. ಆದರೆ, ನಾರಾಯಣರಾವ್‌ರವರು ಶಾಸ್ತ್ರಿಗಳನ್ನು ಅತಿಥಿಗಳಂತೆ ತಿಳಿದು 'ಅತಿಥಿದೇವೋಭವ'' ಮಾತಿಗೆ ಅರ್ಥವನ್ನು ಕಲ್ಪಿಸಿ, ಹದಿನೈದು ದಿನಗಳವರೆಗೆ ಊಟ ವಸತಿಗಳನ್ನು ನೋಡಿಕೊಂಡಿದ್ದಾರೆ. ಕೇವಲ ಪರಿಚಯದಿಂದ ನಿರ್ಗತಿಕರಾಗಿದ್ದ ಕೃಷ್ಣಶಾಸ್ತ್ರಿಯವರನ್ನು ತನಗೇ ಸಾಲದಷ್ಟು ಇರುವಂತಹ ಚಿಕ್ಕ ಮನೆಯಲ್ಲಿ ಆಶ್ರಯವನ್ನು ನೀಡಿದ್ದರು. ಶಾಸ್ತ್ರಿಯವರು ನಾರಾಯಣರಾವ್‌ರವರಲ್ಲಿರುವಂತಹ

ವಿಶೇಷತೆಯನ್ನು ಸ್ವತಃ ಅನುಭವಿಸಿ ನೆನಪು ಮಾಡಿಕೊಳ್ಳುತ್ತಾರೆ. ಶಾಸ್ತ್ರಿಯವರೇ ತಾವಾಗಿ ಹೊರಟು ಹೋಗುವವರೆಗೂ ಯಾವುದೇ ರೀತಿಯ ತೊಂದರೆಯನ್ನು ಕೊಡದೆ ಚೆನ್ನಾಗಿ ನೋಡಿಕೊಂಡರು. ಹಳ್ಳಿಗೆ ವಾಪಾಸ್ಸು ಹಿಂತಿರುಗಲು ಪ್ರಯತ್ನಿಸುತ್ತಿರುವ ಶಾಸ್ತ್ರಿಯವರಿಗೆ ಉತ್ಸಾಹವನ್ನು ತುಂಬಿ ಎಸ್.ಎಸ್.ಎಲ್.ಸಿವರೆಗೆ ವಿದ್ಯಾಭ್ಯಾಸ ಪೂರೈಸುವಂತೆ ಮನವರಿಕೆ ಮಾಡಿಕೊಡುತ್ತಾರೆ. ನಾರಾಯಣರಾವ್‌ರವರಿಗೆ ತನ್ನ ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಇದ್ದುದರಲ್ಲೇ ಇತರರಿಗೆ ಹಂಚಿ ತಿನ್ನಬೇಕೆಂಬ ಹಂಬಲ ಅವರಲ್ಲಿ ಇರುವುದನ್ನು ಶಾಸ್ತ್ರಿಗಳು ಗುರ್ತಿಸಿದ್ದಾರೆ.

ಇದೇ ನೆನಪಿನಲ್ಲಿ ಶಾಸ್ತ್ರಿಯವರು ಮತ್ತೊಬ್ಬರು ಅಜ್ಜಿ ರಿಟೈರ್ಡ್ ಮಿಡ್‌ವೈಫ್‌ರವರನ್ನು ನೆನೆಸುತ್ತಾರೆ. ಇವರೂ ಕೂಡ ಶಾಸ್ತ್ರಿಯವರಿಗೆ ತಂಗಲು ರೂಮಿನ ವ್ಯವಸ್ಥೆ ಮಾಡಿಕೊಟ್ಟವರು. ಶಾಸ್ತ್ರಿಯವರಿಗೆ ಊಟಕ್ಕೆ ತೊಂದರೆಯಾಗುತ್ತದೆ ಎಂಬುದನ್ನು ಅರಿತು ತನ್ನ ಮೊಮ್ಮಕ್ಕಳ ಜೊತೆಯಲ್ಲಿ ಇವರೂ ಒಬ್ಬರೆಂದು ತಿಳಿದುಕೊಂಡು ಚೆನ್ನಾಗಿ ಉಪಚರಿಸಿದರು. ಶಾಸ್ತ್ರಿಯವರು ತನ್ನ ರೂಮಿನ ಬಾಡಿಗೆ ಎಷ್ಟು ಕೊಡಬೇಕೆಂದು ಕೇಳಿದಾಗ, "ಚಿಕ್ಕ ಮಕ್ಕಳಿಗೆ ಪಾಠ ಹೇಳುವುದೇ ರೂಮಿನ ಬಾಡಿಗೆ" ಎಂಬುದಾಗಿ ತಿಳಿಸುತ್ತಾಳೆ. ಶಾಸ್ತ್ರಿಯವರು ಅವರ ಮನೆಯಲ್ಲಿಯೇ ಇದ್ದುಕೊಂಡು ಓದಿ S.S.L.C ಪಾಸು ಮಾಡುತ್ತಾರೆ.

ಅಂದರೆ ನಾರಾಯಣರಾಯರು ಯಾರೋ, ಅಜ್ಜಿ ಯಾರೋ, ಏನು ಸಂಬಂಧವೋ, ಆದರೆ ಶಾಸ್ತ್ರಿಯವರು ದುರ್ಬರ ದಿನಗಳಲ್ಲಿ ನೆಲೆಯಾದರು ಎಂಬುದನ್ನು ನೆನಪಿಸಿಕೊಳ್ಳುತ್ತಾರೆ. ಶಾಸ್ತ್ರಿಯವರು ನಾರಾಯಣರಾಯರ ಹಾಗೂ ಮಿಡ್‌ವೈಫ್ ಅಜ್ಜಿಯಲ್ಲಿ ತನ್ನ ತಂದೆ ತಾಯಿಗಳನ್ನು ಕಾಣುತ್ತಾರೆ.

### ಸೋಮೇಶ್ವರ ಭಾಗವತರು

ಸೋಮೇಶ್ವರ ಭಾಗವತರು ಒಬ್ಬ ಘನವಿದ್ವಾಂಸರು, ಸಂಗೀತದಲ್ಲಿ ಪ್ರಸಿದ್ಧರು. ಆದರೆ ತುಂಬಾ ಬಡವರಾಗಿದ್ದರು ಎಂಬುದಾಗಿ ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ. ಭಾಗವತರ ಬಗ್ಗೆ ಇತರ ಎಲ್ಲಾ ಸಂಗೀತಗಾರರಿಗೂ ಬಹಳ ಗೌರವವಿತ್ತು. ಆದರೂ ಸಹ ಜನರು ಇವರಿಗೆ ಸಮಾಜದಲ್ಲಿ ಉತ್ತಮವಾದ ಸ್ಥಾನಮಾನವನ್ನು ಕಲ್ಪಿಸಿರಲಿಲ್ಲ ಎಂಬುದಾಗಿ ಶಾಸ್ತ್ರಿಗಳು ಈ ಭಾಗದಲ್ಲಿ ತಿಳಿಯಪಡಿಸುತ್ತಾರೆ. ಒಮ್ಮೆ ಸೋಮೇಶ್ವರ ಭಾಗವತರು ತುಂಬಾ ಹಸಿವಿನಿಂದ ಹೋಟೆಲಿಗೆ ಹೋಗಿರುತ್ತಾರೆ, ಆದರೆ ಅವರ ಹತ್ತಿರ ಹಣವಿರಲಿಲ್ಲ. ಶಾಸ್ತ್ರಿಯವರು ಕೂಡ ಆ ಹೋಟೆಲ್‌ನಲ್ಲಿ ಇರುತ್ತಾರೆ. ಭಾಗವತರು ಹೋಟೆಲ್‌ನ ಮಾಲಿಕ ಮಣಿಅಯ್ಯರ್ ಹತ್ತಿರ ತಮಿಳಿನಲ್ಲಿ ತುಂಬಾ ಹಸಿವಾಗುತ್ತಿದೆ ಎಂದು ನೋವಿನಿಂದ ಹೇಳಿಕೊಂಡರು, ಆಗ ಮಣಿಅಯ್ಯರು "ಒಂದು ಹಾಡು ಹೇಳಿದ್ರೆ ದೋಸೆ ಕೊಡ್ತೀನಿ" ಎಂದರು. ಇದನ್ನು ಕಣ್ಣಾರೆ ಕಂಡು ಕಿವಿಯಾರ ಕೇಳಿ ಶಾಸ್ತ್ರಿಯವರಿಗೆ ತುಂಬಾ ಬೇಸರವಾಯಿತು. ಶಾಸ್ತ್ರಿಗಳು ಅವರನ್ನು ಕರೆದುಕೊಂಡು ಊಟದ ವ್ಯವಸ್ಥೆ ಮಾಡಿಸಿದರು.

ಶಾಸ್ತ್ರಿಯವರು ಈ ಒಂದು ಭಾಗದಲ್ಲಿ ಮುಖ್ಯವಾಗಿ ನೆನಪಿಸಿಕೊಳ್ಳುವ ವಿಷಯವೆಂದರೆ, ಅಪಾರವಾದ ಜ್ಞಾನಿ, ಪಂಡಿತ, ವಿದ್ವಾಂಸ, ಎಂಬ ಕೀರ್ತಿಯನ್ನು ಹೊಂದಿದ್ದರೂ ಸಹ ಸಮಾಜವು

ಭಾಗವತರನ್ನು ಯಾವ ರೀತಿ ನಡೆಸಿಕೊಳ್ಳುತ್ತೆ ಅವರಿಗೆ ಸಮಾಜವು ಕೊಡುವಂತಹ ಸ್ಥಾನಮಾನದ ಬಗ್ಗೆ ಶಾಸ್ತ್ರಿಯವರು ಈ ಭಾಗದಲ್ಲಿ ವಿಷಾದದಿಂದ ನೆನಪಿಸಿಕೊಳ್ಳುತ್ತಾರೆ. ಕೊನೆಯಲ್ಲಿ ಸೋಮೇಶ್ವರ ಭಾಗವತರು ತೀರಿಕೊಂಡಾಗ ಅವರ ಶವಕ್ಕೆ ಹೆಗಲು ಕೊಡುವಷ್ಟು ಜನ ಕೂಡ ಇಲ್ಲದ್ದು ಕಂಡು ಶಾಸ್ತ್ರಿಗಳು ನೋವಿನಿಂದ ಎಷ್ಟೇ ವಿದ್ವತ್ತು ಪರಿಶ್ರಮಗಳಿದ್ದರೂ, ಈ ಸಮಾಜದ ಮಧ್ಯೆ ಪಡೆದುಕೊಂಡ ಭಾಗ್ಯ ಅಷ್ಟೇ ಎಂದು ಕೊಳ್ಳುತ್ತಾರೆ. ಇದೇ ಭಾಗದಲ್ಲಿ ಮಧುರೈ ಮಣಿಅಯ್ಯರ್ ಎಂಬುವವರು ಚಿಕ್ಕ ವಯಸ್ಸಿನಲ್ಲಿಯೇ ಪೋಲಿಯೊಪೀಡಿತ ಮಹಾನ್ ವಾಧ್ಯ ಪಾಂಡಿತ್ಯವನ್ನು ನೆನಪಿಸಿಕೊಳ್ಳುತ್ತಾರೆ. ಎರಡೂ ಕಾಲುಗಳನ್ನು ಕಳೆದುಕೊಂಡಿದ್ದರೂ ಉತ್ತಮ ವಾದ್ಯವಾದಕನಾಗಿ ಹೊರಹೊಮ್ಮಿರುವುದು, ಡಿ.ವಿ.ಜಿಯವರು ಚೌಡಯ್ಯ ಹಾಗೂ ಫಾಲ್ಘಾಟ್ ಮಣಿಅಯ್ಯರ್‌ರವರಿಗೆ ಹಾರ ಹಾಕಿ ಗೌರವಿಸಿದ್ದಾರೆ. ಇದನ್ನು ಕಂಡಂತಹ ಶಾಸ್ತ್ರಿಯವರು ವಿಧ್ವತ್ತಿಗೆ ಯಾವುದೇ ರೀತಿಯ ಅಂಗವೈಕಲ್ಯ ಹತ್ತಿರ ಸುಳಿಯಲಾರದು ಎಂಬುದನ್ನು ನೆನಪಿಸಿಕೊಳ್ಳುತ್ತಾರೆ.

### ಚೆಂಬೆ ವೈಧ್ಯನಾಥ ಭಾಗವತರು

'ಬೆಳೆಯುವ ಸಿರಿ ಮೊಳಕೆಯಲ್ಲಿ'[೫] ಎಂಬ ನಾಣ್ಣುಡಿಯಂತೆ ಕೃಷ್ಣಶಾಸ್ತ್ರಿಯವರು ಒಬ್ಬ ಮೃದಂಗವಾದಕನನ್ನು ಇಲ್ಲಿ ನೆನಪಿಸಿಕೊಳ್ಳುತ್ತಾರೆ. ಸುಮಾರು ೧೫ ವರ್ಷ ವಯಸ್ಸಿನ ಹುಡುಗನು ಮಹಾನ್ ಸಂಗೀತಗಾರರ ಜೊತೆಯಲ್ಲಿ ಮೃದಂಗವನ್ನು ನುಡಿಸುತ್ತಿದ್ದುದನ್ನು ಕಂಡು ಇವರು ಆಶ್ಚರ್ಯ ಚಕಿತರಾದರು. ಮಹಾನ್ ಪಂಡಿತರಾದ ಪಿಟೀಲು ಚೌಡಯ್ಯರವರಿಂದಲೂ ಪರೀಕ್ಷೆಗೊಳಗಾದಂತಹ ಹುಡುಗನ ಸಾಧನೆಯನ್ನು ಕಣ್ಣಾರೆ ಕಂಡು ಕಿವಿಯಾರೆ ಕೇಳಿ ಶಾಸ್ತ್ರಿಗಳು ನಿಬ್ಬೆರಗಾಗಿದ್ದನ್ನು ಇಲ್ಲಿ ನೆನಪಿಸಿಕೊಂಡಿದ್ದಾರೆ. ಈ ಒಂದು ಭಾಗದಲ್ಲಿ ಹುಡುಗನಾದ ಮೃದಂಗವಾದಕನ ವಿನಯ, ಅದ್ಭುತ ಪ್ರತಿಭೆಯನ್ನು ಗುರುತಿಸಿದ್ದಾರೆ. ಆ ಹುಡುಗನು ಮುಂದೆ ಪ್ರತಿಭಾನ್ವಿತ ಹೆಸರುವಾಸಿಯಾದ ವಿದ್ವಾನ್ ಆದನು ಎಂಬುದನ್ನು ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ.

### ನಾವೂ ನಾಟಕ ಆಡಿದ್ದು

ಒಳ್ಳೆಯ ಕಾರ್ಯವನ್ನು ಮಾಡಬೇಕೆಂದಾಗ ಆಗುವಂತಹ ಸಮಸ್ಯೆಗಳು ಎಷ್ಟೊಂದು ಸುಲಭವಾಗಿ ಮಾಯವಾಗುತ್ತವೆ ಎಂಬುದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ನೆನಪಿಸಿಕೊಳ್ಳುತ್ತಾರೆ. ಶಾಸ್ತ್ರಿಯವರು ಹೈಸ್ಕೂಲ್ ಓದುತ್ತಿರುವಾಗ, ದೂರದಿಂದ ಬರುವ ವಿದ್ಯಾರ್ಥಿಗಳಿಗೆ ಮದ್ಯಾಹ್ನದ ಉಪಹಾರದ ವ್ಯವಸ್ಥೆಯನ್ನು ಮಾಡಿಸಲು ನಾಟಕವನ್ನು ಆಡಿದ್ದನ್ನು ಸ್ಮರಿಸಿಕೊಳ್ಳುತ್ತಾರೆ. ಶಾಸ್ತ್ರಿಯವರು ಹಾಗೂ ಅವರ ಮಿತ್ರರು ನಾಟಕವನ್ನು ಆಡಲು ಹಲವಾರು ಗಣ್ಯಾತಿಗಣ್ಯರುಗಳು ಸಹಾಯ ಮಾಡಿದ್ದನ್ನು ನೆನಪಿಸಿಕೊಳ್ಳುತ್ತಾರೆ. ನಾಟಕ ಆಡುವುದರ ಮೂಲಕ ಅದರಿಂದ ಬರುವಂತಹ ಹಣದಿಂದ ಊಟದ ವ್ಯವಸ್ಥೆ ಮಾಡುವುದು ಶಾಸ್ತ್ರಿಯವರ ಪ್ರಮುಖ ಉದ್ದೇಶವಾಗಿತ್ತು. ಈ ಉದ್ದೇಶಕ್ಕಾಗಿ ಸಹಾಯ ಮಾಡಿದವರಲ್ಲಿ ಮುಖ್ಯವಾಗಿ ಗುಬ್ಬಿವೀರಣ್ಣನವರು, DPI ಸುಬ್ಬರಾವ್, ಮಿರ್ಜಾ ಇಸ್ಮಾಯಿಲ್, ಟೀಚರ್ ನರಸಿಂಹನ್, ಹಾಗೂ

ತಮ್ಮ ಶಾಲೆಯ ಸಿಬ್ಬಂದಿಯವರು, ಸುಮಾರು ೧೫೦೦ ರೂಪಾಯಿಗಳು ಈ ನಾಟಕದಿಂದ ಸಂಗ್ರಹವಾಗಿತ್ತು (ಈ ಹೊತ್ತಿನ ಲೆಕ್ಕದಲ್ಲಿ ಒಂದೂವರೆ ಲಕ್ಷ) ಅಂದರೆ ಒಟ್ಟಿನಲ್ಲಿ ಒಳ್ಳೆಯ ಕಾರ್ಯವನ್ನು ಮಾಡುವಲ್ಲಿ ಇಡೀ ಶಾಲೆಯೇ ಬೆಂಬಲಕ್ಕೆ ನಿಂತಿದ್ದನ್ನು ಹಾಗೂ ಸಮಾಜದಲ್ಲಿನ ಜನರು ನೀಡಿರುವಂತಹ ಪ್ರೋತ್ಸಾಹವನ್ನು ಶಾಸ್ತ್ರಿಯವರು ನೆನಪಿಸಿಕೊಳ್ಳುತ್ತಾರೆ.

**ಟಿ.ಎಸ್ ವೆಂಕಣ್ಣಯ್ಯ**

ಶಿಕ್ಷಕರು ತಮ್ಮ ಶಾಲೆಯಲ್ಲಿರುವ ಎಲ್ಲಾ ಮಕ್ಕಳು ಒಂದೇ ಎಂಬ ಭಾವನೆಯನ್ನು ಹೊಂದಿರಬೇಕು ಅವರುಗಳಿಗೆಲ್ಲರಿಗೂ ಒಂದೇ ರೀತಿಯ ವಿದ್ಯಾಭ್ಯಾಸ, ಗೌರವ, ಶಿಕ್ಷೆಯನ್ನು ನೀಡಬೇಕು ಆಗ ಮಾತ್ರ ಉತ್ತಮ ಶಿಕ್ಷಕ ಎನಿಸಬಲ್ಲ. ಇಂತಹ ವ್ಯಕ್ತಿತ್ವವನ್ನು ಹೊಂದಿದ್ದಂತಹ ಟಿ.ಎಸ್ ವೆಂಕಣ್ಣಯ್ಯನವರನ್ನು ಇಲ್ಲಿ ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ. ಇಂಟರ್ ಮಿಡಿಯಟ್ ಪರೀಕ್ಷೆಯಲ್ಲಿ ಮಹಾರಾಜರ ಮಗ ಜಯಚಾಮರಾಜ ಒಡೆಯರನ್ನು ಫೇಲು ಮಾಡಿರುತ್ತಾರೆ.[೬] ಇದಕ್ಕೆ ಪ್ರತ್ಯುತ್ತರವಾಗಿ ಶಿಕ್ಷೆ ಲಭಿಸುವುದೆಂದು ಬಯಸಿದ್ದರು. ಆದರೆ ಉತ್ತಮ ಗೌರವಾದಾರಗಳು ಲಭಿಸಿದವು. ಜೊತೆಗೆ ಫೇಲಾದ ವಿದ್ಯಾರ್ಥಿಗೆ ಪಾಠ ಹೇಳಿಕೊಡುವ ಹೊಣೆಯನ್ನು ಹೊತ್ತುಕೊಂಡರು.

ಇಲ್ಲಿ ಮಹಾರಾಜರಿಗೆ ವೆಂಕಣ್ಣಯ್ಯನವರ ಬಗೆಗಿದ್ದ ಗೌರವ, ಪ್ರೀತಿ ಎಂಥಾದ್ದು, ಪ್ರೊಫೆಸರ್ ಆಗಿದ್ದ ವೆಂಕಣ್ಣಯ್ಯನವರ ವ್ಯಕ್ತಿತ್ವ, ಮನೋವೃತ್ತಿ ಎಂಥಾದ್ದೆಂದು ಶಾಸ್ತ್ರಿಯವರು ನೆನಪಿಸಿಕೊಳ್ಳುತ್ತಾರೆ.

**ತ.ರಾ.ಸು**

ಕೃಷ್ಣಶಾಸ್ತ್ರಿ ಮತ್ತು ತ.ರಾ.ಸು ಬಾಲ್ಯ ಸ್ನೇಹಿತರು. ತ.ರಾ.ಸು ರವರು ಓದಿನಲ್ಲಿ ಹಿಂದುಳಿದಿದ್ದರೂ ಸಾಹಿತಿಯಾಗಿ ತುಂಬಾ ಬೆಳೆದಿದ್ದರು ಎಂಬುದನ್ನು ಕೃಷ್ಣ ಶಾಸ್ತ್ರಿಗಳು ಇದರಲ್ಲಿ ಗುರ್ತಿಸಿದ್ದಾರೆ.

ತ.ರಾ.ಸು ರವರ ದುರ್ಗಾಸ್ತಮಾನವನ್ನು ರಚಿಸಿದ ರೀತಿಯನ್ನು ಕಣ್ಣಾರೆ ಕಂಡಂತಹ ಶಾಸ್ತ್ರಿಯವರು "ಮದಕರಿ ನಾಯಕನೇ ಒಳ ಹೊಕ್ಕು ಬರೆಯಿಸಿದ್ದಾನೆ" ಎಂಬಂತೆ ಭಾಸರಾಗಿದ್ದರು.[೭] ಅಂದರೆ ತ.ರಾ.ಸು ರವರಲ್ಲಿದ್ದ ಅದ್ಭುತ ಕಾದಂಬರಿ ಶೈಲಿಯನ್ನು ಇಲ್ಲಿ ಗುರುತಿಸಿದ್ದಾರೆ. ತ.ರಾ.ಸು ಹಾಗೂ ಶಾಸ್ತ್ರಿಗಳಿಬ್ಬರೂ ಬಾಲ್ಯಸ್ನೇಹಿತರು ಎಂಬುದನ್ನು ತಿಳಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

**ತ.ಸು ಶಾಮರಾಯರು ಮತ್ತು ಹಾಮಾನಾ**

ಕೃಷ್ಣಶಾಸ್ತ್ರಿಯವರು ತ.ಸು ಶಾಮರಾಯರಿಗೆ ಇದ್ದಂತಹ ಪುಸ್ತಕಗಳ ಮೇಲಿನ ಅತಿಯಾದ ಪ್ರೀತಿಯನ್ನು ಗುರುತಿಸಿದ್ದಾರೆ. ಶಾಮರಾಯರು ನೇರ ನುಡಿಯನ್ನು ಹೊಂದಿದ್ದರೂ ಕ್ಷಣಾರ್ಧದಲ್ಲಿ ತಮ್ಮ ಕೋಪವನ್ನು ಕಡಿಮೆ ಮಾಡಿಕೊಳ್ಳುವಂತಹ ಗುಣವನ್ನು ಹೊಂದಿದ್ದರು. ಶಾಮರಾಯರು ಹೃದಯ ವೈಶಾಲ್ಯ ಎಂಥಾದ್ದು ಅವರ ಶಿಷ್ಯಪ್ರೇಮ ಯಾವ ನೆಲೆಯದ್ದು ಎಂದು ಶಾಸ್ತ್ರಿಗಳು ಇದರಲ್ಲಿ ನೆನಪಿಸಿಕೊಂಡಿದ್ದಾರೆ. ಹಾಗೂ ಹ.ಮಾ.ನಾಯಕರು ನಡೆದುಕೊಳ್ಳುವ ರೀತಿಯನ್ನು ಸ್ಮರಿಸಿಕೊಳ್ಳುತ್ತಾರೆ.

### ದಿವಾನ್ ಮಿರ್ಜಾಇಸ್ಮಾಯಿಲ್ ಮತ್ತು ಇಂಜಿನಿಯರ್ ನಾರಾಯಣಸ್ವಾಮಿ

ಕೃಷ್ಣಶಾಸ್ತ್ರಿಯವರು ಇಲ್ಲಿ ನಾರಾಯಣಸ್ವಾಮಿ ಎಂಬ PWD ಇಂಜಿನಿಯರ್ ರವರ ಕಾರ್ಯ ದಕ್ಷತೆಯನ್ನು ಗುರುತಿಸಿದ್ದಾರೆ. ಉತ್ತಮವಾದಂತಹ ದಕ್ಷ ಕೆಲಸಗಾರರನ್ನು ಗುರುತಿಸಿ ಮಿರ್ಜಾ ಇಸ್ಮಾಯಿಲ್‌ರವರು ನೀಡಿರುವಂತಹ ಪ್ರೋತ್ಸಾಹವನ್ನು ಶಾಸ್ತ್ರಿಯವರು ಇಲ್ಲಿ ನೆನಪಿಸಿಕೊಂಡಿದ್ದಾರೆ.

ಮಿರ್ಜಾಇಸ್ಮಾಯಿಲ್‌ರವರ ವ್ಯಕ್ತಿತ್ವ, ಇಂಜಿನಿಯರ್ ನಾರಾಯಣಸ್ವಾಮಿಯವರ ದಕ್ಷತೆಯನ್ನು ಇಲ್ಲಿ ಸ್ಮರಿಸಲಾಗಿದೆ.

### ಸ್ವಾತಂತ್ರ್ಯ ದಿನಾಚರಣೆ -೧೫ ಆಗಸ್ಟ್ ೧೯೪೭

ಗಾಂಧೀಜಿಯವರ ಇಚ್ಚೆಯಾಗಿದ್ದ ಸರಳತೆ, ಸಮಾನತೆ, ಸ್ವಾತಂತ್ರ್ಯ ಸಹಜೀವನದ ಬಾಳುವೆಯನ್ನು ಶಾಸ್ತ್ರಿಯವರು ಇಲ್ಲಿ ಗುರುತಿಸಿದ್ದಾರೆ. ಸ್ವಾತಂತ್ರ್ಯ ಬಂದ ದಿನದಂದು ಹಳ್ಳಿಯ ಜನರೆಲ್ಲರೂ ಒಟ್ಟಾಗಿ ಒಂದು ಕಡೆ ಅಡುಗೆಯನ್ನು ಮಾಡಿ ಎಲ್ಲರೂ ಊಟ ಮಾಡಿದ್ದನ್ನು ಶಾಸ್ತ್ರಿಗಳು ಕಣ್ಣಾರೆ ಕಂಡು ಗಾಂಧೀಜಿಯವರ ಕನಸು ನನಸಾಯಿತು ಎಂದುಕೊಂಡರು, ಹಾಗೂ ಇದನ್ನು ಕಂಡ ಇತರ ಹಳ್ಳಿಗಳಲ್ಲಿಯೂ ಕೂಡಾ ಇದೇ ರೀತಿ ಆಚರಿಸಿದರು.

ಹಳ್ಳಿಯ ಜನರೆಲ್ಲರೂ ಒಟ್ಟಾಗಿ ಭಜನೆಯನ್ನು ಮಾಡುತ್ತಾ ಎಲ್ಲಾ ದೇವರುಗಳಿಗೆ ಪೂಜೆ ಸಲ್ಲಿಸುತ್ತಾ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಿದರು. ಜನರೆಲ್ಲರೂ ತಾವು ಒಂದೇ ತಾಯಿಯ ಮಕ್ಕಳು ಎಂಬಂತೆ ವರ್ತಿಸುವುದನ್ನು ಶಾಸ್ತ್ರಿಗಳು ಕಂಡರು. ಕೇವಲ ತೋರುಗಾರಿಕೆ ಅಥವಾ ಒತ್ತಡಕ್ಕೆ ಮಣಿದು ಅಲ್ಲಿ ಮನಃ ಪೂರ್ವಕವಾಗಿ ತ್ರಿಕರಣ ಪೂರ್ವಕವಾಗಿ ವರ್ತಿಸಿದರು ಎಂದು ಹೇಳುತ್ತಾರೆ. ಇಲ್ಲಿ ಇನ್ನೊಂದು ವಿಶೇಷವೆಂದರೆ ಆ ಹಳ್ಳಿ ಜನರನ್ನು ಹುರಿದುಂಬಿಸಲು ಪ್ರೇರೇಪಿಸಲು ಯಾರೂ ಇರಲಿಲ್ಲ, ಆದರೆ ಜನ ಸಹಜವಾಗಿ, ಸ್ವಯಂ ಪ್ರೇರಿತರಾಗಿ ವರ್ತಿಸಿರುವುದು ವಿಶೇಷವೆಂದು ಕೃಷ್ಣಶಾಸ್ತ್ರಿಯವರು ಗುರ್ತಿಸಿದ್ದಾರೆ. ಇಂದು ಜಾತಿಗಳಲ್ಲೇ ಒಳಜಾತಿಗಳು, ಒಳಪಂಗಡಗಳು, ಆ ಪಂಗಡಗಳಲ್ಲೇ ಕಿತ್ತಾಟ, ಪೈಪೋಟಿ ಗುಂಪುಗಾರಿಕೆ, ಹಣಕ್ಕಾಗಿ ಪೈಪೋಟಿ ಭಾರತದ ಐಕ್ಯತೆಯನ್ನು ಛಿದ್ರಿಸುತ್ತಿದೆ ಎಂದು ಶಾಸ್ತ್ರಿಯವರು ಇದರಲ್ಲಿ ಸ್ಮರಿಸಿಕೊಳ್ಳುತ್ತಾರೆ.

### ಉಪಾಧ್ಯಾಯರ ಸಂಘ

"ಜನರಿಗೆ ಸರಿಯಾಗಿ ತಿಳುವಳಿಕೆಯಾಗುವ ರೀತಿಯಲ್ಲಿ ಹೇಳಿದರೆ ಅವರ ಮನಸ್ಸನ್ನು ಪರಿವರ್ತನೆ ಮಾಡಬಹುದು" ಎಂಬಂತಹ ಗಾಂಧೀಜಿಯವರ ಅನಿಸಿಕೆಗಳನ್ನು ಗಾಂಧೀವಾದಿಯಾದಂತಹ ಶಾಸ್ತ್ರಿಗಳು ತಮ್ಮ ಉಪಾಧ್ಯಾಯರ ಸಂಘದಿಂದ ಪ್ರಾಯೋಗಿಕವಾಗಿ ಪ್ರಯೋಗಿಸಲಾಗುತ್ತದೆ. ಹಾಗೂ ಜನರಿಂದ ಉತ್ತಮವಾದಂತಹ ಪ್ರತಿಕ್ರಿಯೆ ದೊರಕುತ್ತದೆ ಎಂಬುದನ್ನು ತಿಳಿಸುವುದು ಕೃಷ್ಣಶಾಸ್ತ್ರಿಗಳ ಪ್ರಮುಖ ಉದ್ದೇಶವಾಗಿದೆ. ಹಳ್ಳಿಯಲ್ಲಿನ ಶಾಸ್ತ್ರಿಗಳ ಸ್ನೇಹಿತರೆಲ್ಲರೂ ಸೇರಿ ಉಪಾಧ್ಯಾಯರ ಸಂಘವನ್ನು ಸ್ಥಾಪಿಸಿ, ಅದರ ಮೂಲಕ ರಜಾ ದಿನಗಳಲ್ಲಿ ಹಳ್ಳಿಗಳಲ್ಲಿ ಕೆಲಸಕಾರ್ಯಗಳನ್ನು ಮಾಡುತ್ತಾ ಜನರಿಗೆ

ತಿಳಿಹೇಳುವುದು ಅವರ ಉದ್ದೇಶವಾಗಿತ್ತು. ಇದರಿಂದಾಗಿಯೇ ಶಾಲೆಗಳಿಗೆ, ಶಿಕ್ಷಕರಿಗೆ, ಜನಸಮುದಾಯಕ್ಕೆ ಉತ್ತಮವಾದ ಸಂಬಂಧವೇರ್ಪಟ್ಟಿದ್ದನ್ನು ಶಾಸ್ತ್ರಿಗಳು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

ಶಾಸ್ತ್ರಿಯವರ ಉಪಾಧ್ಯಾಯ ಸಂಘವು ಅನೇಕ ಊರುಗಳಲ್ಲಿ ಶ್ರಮಧಾನದಿಂದ ಸ್ಕೂಲುಗಳನ್ನು ದೇವಸ್ಥಾನ, ರಸ್ತೆ, ಸೇತುವೆಗಳನ್ನು ಕಟ್ಟುವಲ್ಲಿ ಗಾಂಧೀಜಿಯವರ ಆದರ್ಶಗಳು ಉತ್ತಮವಾದ ಪ್ರೇರಣೆಯನ್ನು ನೀಡಿದವು ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳುತ್ತಾರೆ.

**ಗೊಲ್ಲರಹಟ್ಟಿಯೂ ಜೈಮಿನಿಭಾರತವೂ**

ಶಾಸ್ತ್ರಿಯವರು ಗೊಲ್ಲರಹಟ್ಟಿಯ ಜನ ಜೈಮಿನಿಭಾರತದ ಬಗ್ಗೆ ಹೊಂದಿದಂತಹ ಆಸಕ್ತಿಯನ್ನು, ಮಹತ್ವವನ್ನು, ವಿಶ್ಲೇಷಣೆಯನ್ನು ಹಾಗೂ ಯಾವ ರೀತಿ ಅವುಗಳನ್ನು ಹೇಗೆ ಸಂಪಾದಿಸಿದ್ದಾರೆ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

ಶ್ಯಾಮರಾಯ ಎಂಬುವನು ಗೊಲ್ಲರ ಹಟ್ಟಿಯ ಜನರಿಗೆ ಜೈಮಿನಿಭಾರತದ ಬಗ್ಗೆ ಪ್ರವಚನ ಮಾಡಿರುತ್ತಾನೆ[೧೦] ಇದರಿಂದಾಗಿ ಅಲ್ಲಿಯ ಜನ ತುಂಬಾ ಚೆನ್ನಾಗಿ ಅದರ ಬಗ್ಗೆ ತಿಳಿದಿರುವುದನ್ನು ಕೃಷ್ಣಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ.

ಜೈಮಿನಿಭಾರತ ಇರುವುದು ಹಳಗನ್ನಡ ಭಾಷೆಯಲ್ಲಿ, ಇಂತಹ ಕೃತಿಯ ಬಗ್ಗೆ ಗೊಲ್ಲರ ಹಟ್ಟಿಯ ಜನರು ಅರಿತಿರುವುದನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಾರೆ.

**ಕಬ್ಬಿಣ ಅಂಗಡಿ ಸಾಹೇಬರು**

ಕುರಾನ್‌ನಲ್ಲಿ "ಮನುಷ್ಯನನ್ನು ಮನುಷ್ಯ ನಂಬಬೇಕು" ಅಂತ ಹೇಳುವುದಷ್ಟೇ ಅಲ್ಲ, ಹಾಗೆ ನೆಡೆದುಕೊಳ್ಳಬೇಕು ಕೊಟ್ಟಮಾತನ್ನು ಉಳಿಸಿಕೊಳ್ಳಬೇಕು[೧೧] ಎಂಬಂತಹ ಅಂಶಗಳನ್ನು ಕಬ್ಬಿಣದ ಅಂಗಡಿ ಸಾಹೇಬರಿಂದ ಕೃಷ್ಣಶಾಸ್ತ್ರಿಗಳು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

ಅಂಗಡಿಯವರು ಶಾಸ್ತ್ರಿಯವರಿಗೆ ಸುಮಾರು ಐದಾರು ಸಾವಿರ ರೂಪಾಯಿಗಳಷ್ಟು ಸಾಮಾನುಗಳನ್ನು ಕೇವಲ ನಂಬಿಕೆಯಿಂದ ಕೊಡುತ್ತಾರೆ. ಇಂತಹ ನಂಬಿಕೆಯನ್ನು ಉಳಿಸಿಕೊಂಡ ಬಗೆಯನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸಿಕೊಳ್ಳುತ್ತಾರೆ

ಅಂಗಡಿ ಸಾಹೇಬರು ಕೇವಲ ಮಾತಿಗೆ ಕಟ್ಟುಬಿದ್ದು ಹಾಗೆಯೇ ನೆಡೆದುಕೊಂಡ ಬಗೆಯನ್ನು ಹಾಗೂ ಅವರ ಬಗ್ಗೆ ಇರುವಂತಹ ಅಭಿಮಾನ ಗೌರವವನ್ನು ಶಾಸ್ತ್ರಿಯವರು ಇಲ್ಲಿ ಜ್ಞಾಪಿಸಿಕೊಳ್ಳುತ್ತಾರೆ.

**ಫಿಲಿಪೋಸ್ ಮೆಥಾಯ್**

ಶಿಸ್ತು, ಕರ್ತವ್ಯ ಪಾಲನೆಯನ್ನು ಕೃಷ್ಣಶಾಸ್ತ್ರಿಯವರು ಪಿಲಿಪೋಸ್ ಮೆಥಾಯ್[೧೨] ಎಂಬ ಡಿ ಸಿ ಯವರಿಂದ ಕಂಡಿದ್ದನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಕರ್ತವ್ಯ ನಿಷ್ಠೆಯಲ್ಲಿ ಯಾವುದೇ ರಾಜಕೀಯ ವ್ಯಕ್ತಿಗಳಿಗಿಂತಲೂ ತುಂಬಾ ಭಿನ್ನರಾಗಿದ್ದನ್ನು ಶಾಸ್ತ್ರಿಯವರು ಕಂಡಿದ್ದಾರೆ.

ತೀರಾ ನಾಗರೀಕ ಸೌಲಭ್ಯಗಳಿಂದ ಹಿಂದಿರುವಂತ ಗ್ರಾಮ, ತಾಲ್ಲೂಕುಗಳ ವಿವರ ತರಿಸಿಕೊಂಡು ಅದರಂತೆ ಸರ್ಕಾರದ ಸೌಲಭ್ಯಗಳನ್ನು ಹಂಚುವ ರೀತಿಯನ್ನು ಶಾಸ್ತ್ರಿಗಳು ಶ್ಲಾಘಿಸುತ್ತಾರೆ.

ರಾಜಕೀಯ ವ್ಯಕ್ತಿಗಳಿಗೆ ಮಣಿಯದೆ ತಮ್ಮ ಕರ್ತವ್ಯ ನಿಷ್ಠೆಯಿಂದ ಮೀರಾಸಾಬಿಹಳ್ಳಿಯಲ್ಲಿ ಆಸ್ಪತ್ರೆಯನ್ನು ಕಟ್ಟಲು ಶಾಸ್ತ್ರಿಯವರಿಗೆ ಉತ್ಸಾಹ ತುಂಬಿದ್ದನ್ನು ಇಲ್ಲಿ ಸ್ಮರಿಸಿದ್ದಾರೆ.

ಫಿಲಿಪೋಸ್ ಮೆಥಾಯ್‌ರವರಲ್ಲಿದ್ದಂತಹ ಶಿಕ್ಷಕರ ಗುಣಗಳನ್ನು ಹಾಗೂ ಮಕ್ಕಳ ಮೇಲೆ ಇರುವಂತಹ ಪ್ರೀತಿಯನ್ನು ಇಲ್ಲಿ ಶಾಸ್ತ್ರಿಯವರು ಜ್ಞಾಪಿಸಿಕೊಳ್ಳುತ್ತಾರೆ.

**ಕಾಪರಹಳ್ಳಿಯಲ್ಲಿ ನಾಟಕ**

ಕಾಪರಹಳ್ಳಿಯಲ್ಲಿ ಪ್ರದರ್ಶಿಸಿದಂತಹ ನಾಟಕದ ಪರಿಣಾಮದಿಂದಾಗಿ ಆ ಊರಿನ ಜನರಲ್ಲಿರುವ ದ್ವೇಷ, ಅಸೂಯೆ, ಒಳಜಗಳಗಳು ಮಾಯವಾಗಿರುವುದನ್ನು ಶಾಸ್ತ್ರಿಯವರು ತಿಳಿಸುತ್ತಾರೆ. ಈ ನಾಟಕದಿಂದಾಗಿ ಹಳ್ಳಿಯ ಪ್ರತಿಯೊಬ್ಬರೂ ಒಗ್ಗಟ್ಟಾಗಿ ಸೇರಿ ತಮ್ಮ ಎಲ್ಲಾ ಕೆಲಸಗಳನ್ನು ಮಾಡುವಂತೆ ಆಯಿತು ಎಂಬುದಾಗಿ ಇಲ್ಲಿ ಕಂಡು ಬರುತ್ತವೆ.

ಲಿಂಗಪ್ಪ ಎಂಬುವರು ಹಳ್ಳಿಯಲ್ಲಿ ಮಹಿಳಾ ಸಂಘದ ಕಟ್ಟಡವನ್ನು ಕಟ್ಟಿಸಲು ಹಣ ಸಂಗ್ರಹ ಮಾಡಬೇಕಿರುತ್ತದೆ, ಶಾಸ್ತ್ರಿಯವರ ನಾಟಕದಿಂದ ಹಣವನ್ನು ಸಂಗ್ರಹಿಸಬಹುದು ಎಂಬಂತಹ ಮಹಾದಾಸೆಯನ್ನು ಇಟ್ಟುಕೊಂಡು ಪ್ರತಿಯೊಂದು ಏರ್ಪಾಡು ಮಾಡಿಕೊಳ್ಳುತ್ತಾನೆ. ಆದರೆ ಅದೇ ಊರಿನ ಚಿತ್ತಪ್ಪ ನಾಟಕ ಪ್ರದರ್ಶನಕ್ಕೆ ತಕರಾರುಗಳನ್ನು ಮಾಡಲು ಸಿದ್ಧನಿರುತ್ತಾನೆ, ಇಂತಹ ಪರಿಸ್ಥಿತಿಯಲ್ಲಿ ಶಾಸ್ತ್ರಿಯವರು ಹಾಗೂ ಊರಿನ ಎರಲಿಂಗನಾಯ್ಕರಿಂದ ಅವರಿಬ್ಬರಲ್ಲಿನ ಭಿನ್ನಾಭಿಪ್ರಾಯವನ್ನು ಹೋಗಲಾಡಿಸಿದರು. ಲಿಂಗಪ್ಪ ಹಾಗೂ ಚಿತ್ತಪ್ಪ ಇಬ್ಬರ ಕಡೆಯವರೂ ಸೇರಿ ನಾಟಕವನ್ನು ಉತ್ತಮವಾಗಿ ಪ್ರದರ್ಶಿಸಲು ಅವಕಾಶ ಮಾಡಿಕೊಟ್ಟಿದ್ದನ್ನು ಶಾಸ್ತ್ರಿಗಳು ಹೃದಯ ತುಂಬಿ ಸಂತೋಷದಿಂದ ಇಲ್ಲಿ ಹೇಳುತ್ತಾರೆ.

**ಮಲ್ಲಾಡಿಹಳ್ಳಿಯ ರಾಘವೇಂದ್ರ ಸ್ವಾಮೀಜಿ**

ಜಾತಿ, ಮತ, ಧರ್ಮ ಎಂಬ ಬೇಧ ಭಾವನೆಗಳನ್ನು ಎಣಿಸದೆ, ಪ್ರತಿಯೊಬ್ಬರೂ ಒಂದೇ ಎಂಬ ಭಾವನೆಯಿಂದ, ಉಚಿತವಾಗಿ ಜನರಿಗೆ ತನಗೆ ತಿಳಿದಂತಹ ವೈದ್ಯ ಶುಶ್ರೂಷೆಯನ್ನು ನೀಡುವಂಹ ಮಹತ್ವದ ವ್ಯಕ್ತಿಯನ್ನು ಶಾಸ್ತ್ರಿಯವರು ಇಲ್ಲಿ ಸ್ಮರಿಸುತ್ತಾರೆ.

ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮಿಯವರು ಭಿಕ್ಷಾಟನೆಯಿಂದಲೇ ಆಸ್ಪತ್ರೆ, ಶಾಲಾ ಕಾಲೇಜುಗಳನ್ನು ಕಟ್ಟಲು ಬೇಕಾದಂತಹ ಸಾಮಾನು ಸರಂಜಾಮುಗಳನ್ನು ಪಡೆದುಕೊಂಡರು, ಹಾಗೂ ಇವರು ದೇಶದ ಎಲ್ಲಾ ಕಡೆಗಳಲ್ಲೂ ಹೊಂದಿದಂತಹ ಶಿಷ್ಯವೃಂದದವರನ್ನು ಶಾಸ್ತ್ರಿಗಳು ನೆನಪಿಸಿಕೊಳ್ಳುತ್ತಾರೆ.

ಒರಟು ಮಾತಿನ ವ್ಯಕ್ತಿಯನ್ನು ಗುರುತಿಸಿದಂತಹ ಸ್ವಾಮಿಯವರು, ಮಾತಿನಲ್ಲಿ ಒರಟುತನವಿತ್ತೇ ಹೊರತು ವ್ಯಕ್ತಿತ್ವದಲ್ಲಿ, ನಡವಳಿಕೆಯಲ್ಲಿ ಒರಟುತನವಿಲ್ಲ ಎಂಬುದಾಗಿ ಹೇಳಿದ್ದನ್ನು ಶಾಸ್ತ್ರಿಯವರು ಜ್ಞಾಪಿಸಿಕೊಳ್ಳುತ್ತಾರೆ.

### ದೇವರಹಳ್ಳಿಯ ದುರಂತ

ಇಂದಿನ ಕಾಲದಲ್ಲಿರುವಂತಹ ರಾಜಕೀಯ ಪ್ರಗತಿ ಹಾಗೂ ಇದರಿಂದ ಆಗುವಂತಹ ಸಾಮಾನ್ಯ ಜನರಲ್ಲಿನ ಬದಲಾವಣೆಗಳು ಅಥವಾ ಪರಿಣಾಮಗಳ ಬಗ್ಗೆ ಕೃಷ್ಣಶಾಸ್ತ್ರಿಯವರು ತಿಳಿಯಪಡಿಸುತ್ತಾರೆ.

ದೇವರಹಳ್ಳಿಯ ಜನರಲ್ಲಿ ಕುಡಿತದಿಂದಾಗುವ ಪರಿಣಾಮಗಳ ಬಗ್ಗೆ ತಿಳಿಸಿ, ಅದನ್ನು ಬಿಡುವಂತಹ ಮಾರ್ಗೋಪಾಯಗಳನ್ನು ಶಾಸ್ತ್ರಿಯವರು ತಿಳಿಸಿರುತ್ತಾರೆ. ಇದರಿಂದಾಗಿಯೇ ಹಳ್ಳಿಯ ಜನರು ಕುಡಿತವನ್ನು ದಿನದಿಂದ ದಿನಕ್ಕೆ ಬಿಡುತ್ತಾ ಬಂದಿರುತ್ತಾರೆ ಶಾಸ್ತ್ರಿಯವರು ಗಾಂಧೀಜಿಯವರ ಕನಸು ನನಸಾಗುವ ಕಾಲ ಹತ್ತಿರ ಬರುತ್ತಿದೆ, ಎಂಬುದಾಗಿ ಎಣಿಸಿದ್ದರು. ಹಳ್ಳಿಯ ಜನರೂ ಕೂಡ ಇವರಿಗೆ ಸ್ಪಂದಿಸಿ ಉತ್ತಮವಾದ ಬದುಕನ್ನು ಕಾಣಲು ಹವಣಿಸುತ್ತಿದ್ದರು. ಇಂತಹ ಸಂಧರ್ಭದಲ್ಲಿ ಆದಂತಹ ಒಂದೆ ಒಂದು ಎಲೆಕ್ಷನ್‌ನಿಂದಾಗಿ ಇಡೀ ಊರೇ ಊರು ಕುಡುಕರಾಗಿ ಬಿಟ್ಟರು. ನಮ್ಮ ಕೆಟ್ಟ ರಾಜಕೀಯ, ಜನರ ಮೇಲೆ ಯಾವ ರೀತಿಯ ಪ್ರಭಾವ ಬೀರುತ್ತದೆ ಎಂಬುದನ್ನು ಶಾಸ್ತ್ರಿಗಳು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

### ಸತ್ಯಕಾಮ

ಸಾಮಾನ್ಯರಲ್ಲಿ ಸಾಮಾನ್ಯರಾದಂತಹ ವ್ಯಕ್ತಿತ್ವವನ್ನು, ಅದ್ಭುತವಾದ ಸಿದ್ಧಿಗಳನ್ನು ಪಡೆದುಕೊಂಡಂತಹ ಸತ್ಯಕಾಮರನ್ನು ಶಾಸ್ತ್ರಿಗಳು ಇಲ್ಲಿ ಪ್ರಶಂಸಿಸುತ್ತಾರೆ. ಗಾಂಧೀಜಿಯವರ ಒಡನಾಟದಲ್ಲಿ ಇದ್ದಂತಹ ಸತ್ಯಕಾಮರು, ಅವರ ತತ್ವ ಸಿದ್ಧಾಂತಗಳನ್ನು ಅನುಸರಿಸುತ್ತಾ ಹಾಗೂ ಅವರ ಜೊತೆಯಲ್ಲಿಯೇ ಜೈಲುವಾಸವನ್ನು ಅನುಭವಿಸಿದ್ದುದನ್ನು ಕೃಷ್ಣಶಾಸ್ತ್ರಿಗಳು ತಿಳಿಯಪಡಿಸುತ್ತಾರೆ.

ಸತ್ಯಕಾಮರಲ್ಲಿದ್ದಂತಹ ಸಿದ್ಧಿಗಳನ್ನು ರಾಜಕಾರಣಿಗಳು, ದಗಾಕೋರರು, ಕಳ್ಳರು, ಸುಳ್ಳರು, ಮೋಸಗಾರರೆಲ್ಲರೂ ದುರುಪಯೋಗಪಡಿಸಿಕೊಂಡಿದ್ದನ್ನು ಹಾಗೂ ಇದನ್ನರಿತು ಅವುಗಳನ್ನೆಲ್ಲವನ್ನು ಹಿಮಾಲಯದಲ್ಲಿ ಬಿಟ್ಟು ಬಂದಿದ್ದನ್ನು ಶಾಸ್ತ್ರಿಗಳು ಸ್ಮರಿಸುತ್ತಾರೆ.

ಸತ್ಯಕಾಮರ ಶಿಷ್ಯಳಾದ 'ವೀಣಾ ಬನ್ನಂಜೆ'ಯವರು ಮಾಡಿದಂತಹ ಸಾಧನೆಯನ್ನು ಇಲ್ಲಿ ಚರ್ಚಿಸಲಾಗಿದೆ. ವೀಣಾರವರು ಕಲ್ಲಳ್ಳಿಯ ಕೆರೆಗೆ ನೀರು ಬರುವಂತೆ ಮಾಡಲು ಕೈಗೊಳ್ಳುವಂತಹ ಕಾರ್ಯಗಳನ್ನು, ಅವರ ವಿದ್ವತ್ತನ್ನು ಹಾಗೂ ಹಣ ಸಂಗ್ರಹಣೆ ಮಾಡಲು ತೊಡಗಿರುವುದನ್ನು ಶಾಸ್ತ್ರಿಯವರು ಇಲ್ಲಿ ನೆನಪಿಸಿಕೊಳ್ಳುತ್ತಾರೆ.

### ಪುನರ್ಜನ್ಮದಾತರು

'ವೈದ್ಯೋನಾರಾಯಣೋ ಹರಿ' ಎಂಬ ನಾಣ್ನುಡಿಯಂತೆ ಪುನರ್ಜನ್ಮ ನೀಡಿದಂತಹ ವೈದ್ಯರನ್ನು ಹಾಗೂ ತನ್ನ ಸ್ನೇಹಿತರನ್ನು ನೆನಪಿಸಿಕೊಳ್ಳುವುದನ್ನು ಶಾಸ್ತ್ರಿಯವರು ಮರೆಯುವುದಿಲ್ಲ.

ಎರಡು ಬಾರಿ ತನ್ನ ಜೀವಕ್ಕೆ ಕುತ್ತು ಬಂದಿದ್ದು. ಅವುಗಳನ್ನು ಪರೀಕ್ಷಿಸಿ ಸರಿಯಾದ ಚಿಕಿತ್ಸೆಯನ್ನು ನೀಡಿದಂತಹ ವೈದ್ಯರ ಬಗ್ಗೆ ಹಾಗೂ ಸರಿಯಾದ ಸಮಯಕ್ಕೆ ಆಸ್ಪತ್ರೆಗೆ ಕರೆದುಕೊಂಡು ಬಂದಂತಹ ಸ್ನೇಹಿತರನ್ನು ಇಲ್ಲಿ ಸ್ಮರಿಸಿಕೊಳ್ಳುತ್ತಾರೆ.

ಕೃಷ್ಣ ಶಾಸ್ತ್ರಿಯವರಿಗೆ ಪುನರ್ಜನ್ಮ ನೀಡಿದಂತಹ ವ್ಯಕ್ತಿಗಳಲ್ಲಿ ಪ್ರಮುಖವಾಗಿ, ಡಾ.ಶ್ರೀಪತಿ, ಡಾ.ಪರ್ವತಪ್ಪ, ವೋಕಾರ್ಟ್ ಆಸ್ಪತ್ರೆಯ ಡಾ.ಜವಳಿ, ಡಾ.ಜಯಪ್ರಕಾಶ್, ಹಿರಿಯೂರಿನ ಹೋಮಿಯೊಪತಿ ಡಾಕ್ಟರ್ ಕರಿಬಸವಯ್ಯ, ಮೈಸೂರಿನ ಡಾ.ಮಲ್ಲಿಕಾ, ಮತ್ತು ಶಾಂತಲಾ ಅವರನ್ನು ಕೃತಜ್ಞತೆಯಿಂದ ನೆನೆಯುತ್ತಾರೆ.

ಒಮ್ಮೆ ಚೇಳು ಕಡಿತದಿಂದಾಗಿ ಹಾಗೂ ಹುಚ್ಚುನಾಯಿ ಕಡಿತದಿಂದಾಗಿ ಸಾವಿನ ಸಮೀಪವನ್ನು ಮುಟ್ಟಿ ವಾಪಾಸು ಬಂದತಹ ರೀತಿಯನ್ನು ಮೆಲುಕು ಹಾಕುತ್ತಾರೆ.

### ಎಚ್.ವೈ.ಶಾರದಾ ಪ್ರಸಾದ್

"ಬರವಣಿಗೆಗಿಂತ ಬದುಕು ಮುಖ್ಯ"[೧೭] ಎಂಬಂತಹ ಆಶಯವನ್ನು ಹೊಂದಿದಂತಹ ಲೇಖಕ ಶಾರದಾ ಪ್ರಸಾದ್‌ರವರನ್ನು ಶಾಸ್ತ್ರಿಗಳು ನೆನೆಯುತ್ತಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಜೈಲಿಗೆ ಹೋದಂತಹ, ಇಂದಿರಾಗಾಂಧಿಯವರ ಸುದ್ದಿ ಸಲಹೆಗಾರರಾಗಿ ದೆಹಲಿಯಲ್ಲಿದ್ದಂತಹ ಹಾಗೂ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ಇಂದಿರಾಗಾಂಧಿಯವರನ್ನು ಬಿಟ್ಟು ಬಂದಂತಹ ಶಾರದಾ ಪ್ರಸಾದ್‌ರವರ ವ್ಯಕ್ತಿತ್ವವನ್ನು ಕೃಷ್ಣಶಾಸ್ತ್ರಿಗಳು ಖುಷಿಯಿಂದ ಸ್ಮರಿಸುತ್ತಾರೆ.

ಒಟ್ಟಾರೆಯಾಗಿ ಬೆಳಗೆರೆ ಕೃಷ್ಣಶಾಸ್ತ್ರಿಗಳು ತಮ್ಮ ಎಲೆಮರೆಯ ಅಲರು ಕೃತಿಯಲ್ಲಿ ಕೆಲವು ನೆನಪುಗಳನ್ನು ಬಿಚ್ಚಿಟ್ಟಿದ್ದಾರೆ. ಈ ಕೃತಿಯಲ್ಲಿ ಕಂಡು ಬರುವಂತಹ ವ್ಯಕ್ತಿಗಳು ಕೇವಲ ವ್ಯಕ್ತಿಗಳಾಗಿರದೇ ತಮ್ಮದೇ ಆದಂತಹ ವಿಶೇಷ ವ್ಯಕ್ತಿತ್ವವನ್ನು ಹೊಂದಿದ್ದು, ಇವರು ಸಮಾಜಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿರುವುದರ ಬಗ್ಗೆ ಶಾಸ್ತ್ರಿಗಳು ವಿವರವಾಗಿ ಇಲ್ಲಿ ತಿಳಿಯಪಡಿಸಿದ್ದಾರೆ.

## ಅಡಿಟಿಪ್ಪಣಿ

೦೧. ಎಲೆಮರೆಯ ಅಲರು, ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಪುಟ-೨
೦೨. ಅದೇ, ಪುಟ- ೩
೦೩. ಅದೇ, ಪುಟ- ೩
೦೪. ಅದೇ, ಪುಟ- ೪
೦೫. ಅದೇ, ಪುಟ- ೯
೦೬. ಅದೇ, ಪುಟ- ೧೭
೦೭. ಅದೇ, ಪುಟ- ೨೨
೦೮. ಅದೇ, ಪುಟ- ೨೯
೦೯. ಅದೇ, ಪುಟ- ೩೨
೧೦. ಅದೇ, ಪುಟ- ೩೬
೧೧. ಅದೇ, ಪುಟ- ೩೮
೧೨. ಅದೇ, ಪುಟ- ೪೨
೧೩. ಅದೇ, ಪುಟ- ೬೧
೧೪. ಅದೇ, ಪುಟ- ೬೪
೧೫. ಅದೇ, ಪುಟ- ೬೯
೧೬. ಅದೇ, ಪುಟ- ೭೩
೧೭. ಅದೇ, ಪುಟ- ೭೫

### ೩.೫. ಸಾಹಿತಿಗಳ ಸ್ಮೃತಿ

ನವೋದಯ ಸಾಹಿತಿಗಳಲ್ಲಿ ಪ್ರಮುಖರಾದಂತಹ ಸಾಹಿತಿಗಳಾದ ಮಾಸ್ತಿ, ಡಿ.ವಿ.ಜಿ, ಜಿ.ಪಿ.ರಾಜರತ್ನಂ, ವೀ.ಸೀತಾರಾಮಯ್ಯ, ದ.ರಾ.ಬೇಂದ್ರೆ, ಮೊದಲಾದ ಮಹನೀಯರ ವ್ಯಕ್ತಿಚಿತ್ರಗಳು ಈ ಕೃತಿಯಲ್ಲಿ ಕಂಡುಬರುತ್ತದೆ. ಕೃಷ್ಣಶಾಸ್ತ್ರಿಗಳು ಸಾಧ್ಯವಾದಷ್ಟು ಸಾಹಿತಿಗಳ ಮಾತುಗಳನ್ನೇ ನೆನಪಿಟ್ಟುಕೊಂಡು ಅವುಗಳ ಮೂಲಕವಾಗಿ ಇಡೀ ವ್ಯಕ್ತಿತ್ವದ ಪುನರ್‌ನಿರ್ಮಾಣ ಮಾಡಿದ್ದಾರೆ. ಇದರಿಂದ ಈ ವ್ಯಕ್ತಿ ಚಿತ್ರಗಳಿಗೆ ಜೀವಂತಿಕೆ ಬಂದಿದೆ ಎಂದೆನಿಸುತ್ತದೆ. ಸಾಹಿತಿಗಳ ಒಡನಾಟ ಶಾಸ್ತ್ರಿಗಳಿಗೆ ಒಂದು ಪ್ರಿಯವಾದ ಹವ್ಯಾಸ, ಇಂತಹ ಹವ್ಯಾಸದಿಂದ ಸಾಹಿತಿಗಳ ಹೆಚ್ಚಿನ ಉತ್ತಮ ಗುಣಗಳನ್ನು ಶಾಸ್ತ್ರಿಗಳು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದಾರೆ. ನವೋದಯ ಕಾಲಘಟ್ಟದಲ್ಲಿ ಲೇಖಕನ ವ್ಯಕ್ತಿತ್ವದ ಬಗ್ಗೆ ಗೌರವವಿದ್ದ ಕಾಲವಾಗಿತ್ತು. ಸಾಹಿತಿಗಳ ಸ್ವಾರಸ್ಯಕರವಾದಂತಹ ಪ್ರಸಂಗಗಳನ್ನು ಶಾಸ್ತ್ರಿಗಳು ಈ ಕೃತಿಯಲ್ಲಿ ಮೆಲುಕು ಹಾಕಿದ್ದಾರೆ. ನವೋದಯ ಕಾಲದ ಸಾಹಿತಿಗಳ ವ್ಯಕ್ತಿತ್ವದ ನೆರಳು ಬೆಳಕುಗಳಿಂದ, ಬಿಸಿಲು ತಂಪುಗಳಿಂದ, ಮಳೆಬಿಸಿಲುಗಳಿಂದ ಇಲ್ಲಿಯ ಸಾಹಿತ್ಯಿಕ ವಾತಾವರಣ ನಿರ್ಮಾಣವಾಗಿದೆ. ಕೃಷ್ಣಶಾಸ್ತ್ರಿಗಳ ತಂದೆ ಚಂದ್ರಶೇಖರಶಾಸ್ತ್ರಿಗಳು, ಸೋದರಿ ಬೆಳಗೆರೆ ಜಾನಕಮ್ಮನವರೂ ಕೂಡ ನವೋದಯ ಕಾಲಘಟ್ಟದವರೇ ಆಗಿರುವುದರಿಂದ ತಮ್ಮ ಈ ಕೃತಿ ನಿರ್ಮಾಣ ಮಾಡಲು ಅನುಕೂಲವಾಯಿತು. ಶಾಸ್ತ್ರಿಗಳ ಮನೆತನದವರು ನವೋದಯ ಸಾಹಿತಿಗಳ ಒಡನಾಟದಲ್ಲಿಯೇ ಇದ್ದುದರಿಂದ, ಈ ಕೃತಿ ರಚಿಸಲು ಪ್ರೇರಣೆಯಾಯಿತು ಎಂಬುದಾಗಿ ತಿಳಿದು ಬರುತ್ತದೆ.

ಕನ್ನಡ, ತೆಲುಗು, ಸಂಸ್ಕೃತ, ಹಿಂದಿ, ಇಂಗ್ಲೀಷ್, ತಮಿಳು ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಹೊಂದಿದಂತಹ, ರಾಮಾಯಣ, ಮಹಾಭಾರತ, ಭಗವದ್ಗೀತೆ, ಅಷ್ಟಾದಶ ಪುರಾಣಗಳು, ಬ್ರಹ್ಮಸೂತ್ರ ಇತ್ಯಾದಿಗಳೆಲ್ಲ ನಾಲಿಗೆಯ ತುದಿಯಲ್ಲಿ ಕುಣಿದಾಡುತ್ತಿದ್ದ, ಮಹಾಬ್ರಾಹ್ಮಣ, ಮಹಾಕ್ಷತ್ರಿಯ ಹಾಗೂ ಮಹಾದರ್ಶನಗಳನ್ನು ನಾಡಿಗೆ ನೀಡಿದ ದೇವುಡು ನರಸಿಂಹಶಾಸ್ತ್ರಿಗಳ ಒಂದು ಉತ್ತಮ ವ್ಯಕ್ತಿತ್ವವನ್ನು ಸಹ ಕೃಷ್ಣಶಾಸ್ತ್ರಿಗಳು ಇಲ್ಲಿ ನೆನಪಿಸಿಕೊಂಡಿದ್ದಾರೆ.

#### ಮಾಸ್ತಿವೆಂಕಟೇಶ ಅಯ್ಯಂಗಾರ್

ಶ್ರೀಮಾನ್ ಬೆಳಗೆರೆಕೃಷ್ಣಶಾಸ್ತ್ರಿ ಹಾಗೂ ಅವರ ಮನೆತನದವರು ಕನ್ನಡ ಸಾಹಿತ್ಯದಲ್ಲಿ ಬರುವಂತಹ ಹಲವಾರು ಸಾಹಿತಿಗಳೊಡನೆ ನೇರ ಸಂಪರ್ಕವನ್ನು ಹೊಂದಿದ್ದರು. ಅವರುಗಳಲ್ಲಿ ಮುಖ್ಯವಾಗಿ ಕಂಡು ಬರುವವರಲ್ಲಿ ಮಾಸ್ತಿಯವರೂ ಒಬ್ಬರು. ಮಾಸ್ತಿಯವರ ಜೊತೆಯಲ್ಲಿ ಕಳೆದಂತಹ ದಿನಗಳನ್ನು ಕೃಷ್ಣಶಾಸ್ತ್ರಿಗಳು ಈ ಕೆಳಕಂಡಂತೆ ನೆನಪಿಸಿಕೊಳ್ಳುತ್ತಾರೆ.

ಚಳ್ಳಕೆರೆಯಲ್ಲಿ ೧೯೪೪ರ ಸುಮಾರಿನಲ್ಲಿ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಮಾಸ್ತಿಯವರು ಬಯಲು ನಾಟಕದ ಪೂಜಾರಿ ಕ್ಯಾತಣ್ಣನಲ್ಲಿರುವ ಪ್ರತಿಭೆಯನ್ನು ಗುರುತಿಸಿ ಹೊಗಳಿದ್ದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಾರೆ. ಪೂಜಾರಿ ಕ್ಯಾತಣ್ಣ ಮುಮ್ಮೇಳಗಾರ (ಭಾಗವತರು) ಇವರ ಹಾರ್ಮೋನಿಯಂ ಸ್ಮೃತಿ

ಹಾಗೂ ತಕ್ಕುನಾದ ಮದ್ದಳೆಗತ್ತಿನವಾದನ, ಹೊಂದುವಂತಹ ಹಿಮ್ಮೇಳದವರ ಜೊತೆಯಲ್ಲಿ ಇವನ ಗಮ್ಮತ್ತಿನ ಹಾಡುಗಾರಿಕೆಯನ್ನು ಕಂಡ ಮಾಸ್ತಿಯವರು ಉಲ್ಲಾಸದಿಂದ ಪುಳಕಿತರಾಗಿ ಚಪ್ಪಾಳೆಯ ಸುರಿಮಳೆಗೈಯುತ್ತಾ ಪರಿಪರಿಯಾಗಿ ಹೊಗಳಿದ್ದು[೧] ಕಂಡದ್ದನ್ನು ಇಲ್ಲಿ ಶಾಸ್ತ್ರಿಗಳು ಜ್ಞಾಪಿಸಿಕೊಂಡಿದ್ದಾರೆ.

ಜಾಜೂರಿನ ಶ್ರೀ ಜ್ವಾಲಾಪತಿಶಾಸ್ತ್ರಿಗಳು ಈ ಮೇಲಿನ ಶಶಿರೇಖಾ ಪರಿಣಯ ಸಂಸ್ಕೃತ ನಾಟಕವನ್ನು ತಾವೇ ರಚಿಸಿ, ಆ ಊರಿನ ಹುಡುಗರಿಂದ ಪ್ರದರ್ಶಿಸಿದ್ದರು. ಇಂತಹ ಜ್ವಾಲಾಪತಿಯವರನ್ನು ಕಂಡ ಮಾಸ್ತಿಯವರಿಗೆ ಅತ್ಯಾಶ್ಚರ್ಯವಾಗಿತ್ತು ಹಾಗೂ ಅವರು ಅವರನ್ನು ಕಂಡು ಹೀಗೆ ಹೇಳುತ್ತಾರೆ. "ಈ ಸುತ್ತಮುತ್ತಲಿನ ಗ್ರಾಮಗಳಿಗೆ ಈ ಜ್ವಾಲಾಪತಿಶಾಸ್ತ್ರಿಗಳೊಂದು ಅನರ್ಘ್ಯರತ್ನ ಇಲ್ಲಿಯವರು ಇದರ ಬೆಲೆಯನ್ನು ಹೇಗೆ ಕಟ್ಟಬಲ್ಲರು? ಎಷ್ಟು ವಿದ್ವತ್ತು, ಎಂತಹ ಭಾಷಾ ಸಂಪತ್ತು, ಏನು ಪ್ರೌಢಿಮೆ, ಇಂತಹವರಿಗೆ ನಮ್ಮ ವಿಶ್ವವಿದ್ಯಾಲಯಗಳು ಸಹ ಸಾಲದಾಗುತ್ತವೆ. ಇಂತಹ ಮಹನೀಯರು ಈ ಹಳ್ಳಿಯಲ್ಲಿ ಸೇರಿರುವುದು ದೇಶಕ್ಕೆ ನಷ್ಟ. ಸರ್ಕಾರ ಇಂತಹವರನ್ನು ಗುರುತಿಸಿ, ಗೌರವಿಸಿ ಸಮಾಜಕ್ಕೆ ಉಪಯುಕ್ತವಾದ ರೀತಿಯಲ್ಲಿ ಬಳಸಿಕೊಳ್ಳಬೇಕು, ಇಲ್ಲವಾದರೆ ಎಲ್ಲವೂ ವ್ಯರ್ಥವಾಗುತ್ತವೆ. ನಾವೆಂತಹ ಅದೃಷ್ಟ ಹೀನರು ಎಂದು ದುಃಖವಾಗುತ್ತದೆ ಎಂದು ಮಾತನಾಡಿ ಜ್ವಾಲಾಪತಿಶಾಸ್ತ್ರಿಗಳಿಗೆ ತಮ್ಮ ಕೈಯಿಂದಲೇ ಹಾರ ಹಾಕಿ ಗೌರವಿಸಿದುದನ್ನು ಕೃಷ್ಣಶಾಸ್ತ್ರಿಗಳು ಸ್ಮರಿಸುತ್ತಿದ್ದಾರೆ.[೨]

ಮಾಸ್ತಿಯವರು ಹಾಗೂ ಇತರ ಸಾಹಿತಿಗಳು ಹಿರಿಯೂರಿಗೆ ನಾಟಕವನ್ನು ನೋಡಲು ಬಂದಂತಹ ದಿನಗಳಲ್ಲಿ ಹಿರಿಯೂರಿನ ಮೋಕ್ಷಗುಂಡಂ ಮನೆತನದ ಹನುಮಂತರಾಯರ ಮನೆಯಲ್ಲಿ ಸ್ವೀಕರಿಸಿದಂತಹ ಆತಿಥ್ಯವನ್ನು ಶಾಸ್ತ್ರಿಗಳು ಇಲ್ಲಿ ನೆನೆಯುತ್ತಾರೆ. ಹನುಮಂತರಾಯರ ಪತ್ನಿ ರತ್ನಮ್ಮ ಆರೋಗ್ಯ ಸರಿ ಇಲ್ಲದಿದ್ದರೂ ಸಾಹಿತಿಗಳಿಗೆ ಊಟೋಪಚಾರ ಮಾಡಿಸಿದ ರೀತಿಯನ್ನು ಕಂಡು ಮಾಸ್ತಿಯವರು ನಮ್ಮ ಹೆಣ್ಣು ಮಕ್ಕಳಲ್ಲಿ ಎಷ್ಟೊಂದು ತುಂಬು ಮನಸ್ಸಿನವರು ಇರುತ್ತಾರೆ ಎಂದು ಮಾಸ್ತಿಯವರು ಸ್ಮರಿಸುತ್ತಿದ್ದಾರೆ.

ವಿಶ್ವೇಶ್ವರಯ್ಯನವರ ಶಿಸ್ತು, ಕಾರ್ಯದಕ್ಷತೆ, ವಿವೇಕ, ಕರ್ತವ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಮುಂತಾದ ವಿಶೇಷಗಳನ್ನು ಅರಿತಿದ್ದ ಮಹಾರಾಜರು ಅವರನ್ನು ಮೈಸೂರು ಸಂಸ್ಥಾನದ ದಿವಾನರ ಹುದ್ದೆಗೆ ಆಹ್ವಾನಿಸಿದ್ದು, ಆದರೆ ವಿಶ್ವೇಶ್ವರಯ್ಯನವರು "ನಾನೊಬ್ಬ ಕೆಲಸಗಾರ, ದಿವಾನಗಿರಿ ಎಂದರೆ ಆಡಳಿತ ನಡೆಸುವ ಅನುಭವ, ಚಾಕಚಕ್ಯತೆ ಸಮಯಕ್ಕೆ ತಕ್ಕಂತೆ ಹೊಂದಿಕೊಳ್ಳುವ ಬುದ್ಧಿ ಇವೆಲ್ಲ ಇರಬೇಕು ಇವೊಂದು ನನ್ನಲ್ಲಿಲ್ಲ ಆದ್ದರಿಂದ ನಾನು ಇದಕ್ಕೆ ತಕ್ಕವನಲ್ಲ" ಎಂಬುದಾಗಿ ಹೇಳಿದಂತಹ ಇವರ ವ್ಯಕ್ತಿತ್ವದ ಬಗ್ಗೆ ಶಾಸ್ತ್ರಿಗಳು ಮಾಸ್ತಿಯವರಿಂದ ತಿಳಿದುಕೊಂಡರು.

ವಿಶ್ವೇಶ್ವರಯ್ಯನವರ 9 M,S ಎಂಬ ಸೂತ್ರವನ್ನು, ಅದೇನೆಂದರೆ Money, Mind, material, Mines, Men, Machine, Manufacture, Movement, Market ಈ ಒಂಬತ್ತು ಅಂಶಗಳು ಯಾವುದೇ ಕಾರ್ಖಾನೆಯನ್ನು ಸ್ಥಾಪಿಸುವಾಗ ಮುಖ್ಯವಾಗಿ ಗಮನಿಸಬೇಕಾದವುಗಳು ಎಂಬುದು ಅವರ

ಸಿದ್ಧಾಂತವಾಗಿತ್ತು ಎಂಬುದನ್ನು ಶಾಸ್ತ್ರಿಗಳು ಮಾಸ್ತಿಯವರ ಮೂಲಕ ಇಲ್ಲಿ ನೆನೆಯುತ್ತಿದ್ದಾರೆ. ೧. Money- ಯಾವುದೇ ಕಾರ್ಖಾನೆಯನ್ನು ಸ್ಥಾಪಿಸುವಾಗ ಅಗತ್ಯವಾದ ಹಣದ ಪೂರೈಕೆ ಇರಬೇಕು. ೨.Mind- ಈ ಕೆಲಸವನ್ನು ಮಾಡಿಯೇ ತೀರಬೇಕೆಂಬ ಮನಸ್ಸು, ಬುದ್ಧಿ, ಶ್ರದ್ಧೆ, ಇವುಗಳ ಅಗತ್ಯ. ೩.Material- ಅದಕ್ಕೆ ಅಗತ್ಯವಾದ ಸಂಪನ್ಮೂಲಗಳು. ೪.Mines- ಆ ಸುತ್ತಮುತ್ತ ಆ ಉದ್ದೇಶಕ್ಕಾಗಿ ಅಗತ್ಯವಾದ ಖನಿಜಸಂಪತ್ತು. ೫. Men- ವಿವಿಧ ತರಬೇತಿ, ಪರಿಣತಿ ಹೊಂದಿದ ಅಗತ್ಯ ಸಂಖ್ಯೆಯ ಜನ. ೬. Machine- ಯಂತ್ರೋಪಕರಣಗಳು. ೭. Manufacture- ಪಕ್ಕ ಯೋಗ್ಯತೆಯುಳ್ಳ ವಸ್ತುಗಳ ತಯಾರಿಕೆ. ೮.Movement- ಅಗತ್ಯ ಸಾಮಗ್ರಿಗಳನ್ನು ತರಿಸುವುದಕ್ಕೂ, ಕಳುಹಿಸುವುದ್ಕೂ ಸಾರಿಗೆ ಸೌಕರ್ಯ. ೯. Market- ಅಲ್ಲಿ ತಯಾರಾಗುವ ವಸ್ತುಗಳಿಗೆ ಸಮೀಪದಲ್ಲಿ ಅನುಕೂಲಕರವಾದ ಮಾರುಕಟ್ಟೆ ಇದೆಲ್ಲವನ್ನು ಲಕ್ಷ್ಯದಲ್ಲಿಟ್ಟುಕೊಂಡು ಯಾವುದೇ ಕಾರ್ಖಾನೆಯನ್ನು ಸ್ಥಾಪಿಸಬಹುದೆಂಬುದು ವಿಶ್ವೇಶ್ವರಯ್ಯನವರ ಸಿದ್ಧಾಂತವಾಗಿತ್ತು.[೬] ಮಾಸ್ತಿಯವರು ವಿವಾಹ ವಿಚ್ಛೇದನದ ಬಗ್ಗೆ ಹೊಂದಿದಂತಹ ನಿಲುವನ್ನು ಇಲ್ಲಿ ಶಾಸ್ತ್ರಿಗಳು ಸ್ಮರಿಸುತ್ತಾರೆ. "ನಾನು ಅಚ್ಚ ಭಾರತೀಯ ನನ್ನದು ಭಾರತೀಯ ಸಂಸ್ಕೃತಿ ನಮ್ಮ ಸಂಸ್ಕೃತಿಯಲ್ಲಿ ದಾಂಪತ್ಯ ವಿಚ್ಛೇದನ ಇಲ್ಲ"[೭] ಎಂದು ಹೇಳಿದ್ದನು ಶಾಸ್ತ್ರಿಗಳು ಮಾಸ್ತಿಯವರ ಮೂಲಕ ಇಲ್ಲಿ ವಿವರಿಸುತ್ತಿದ್ದಾರೆ.

ನಮ್ಮ ಸಾಹಿತ್ಯ ವಿದ್ವಾಂಸರು ಪಾಶ್ಚಾತ್ಯ ಸಾಹಿತಿಗಳನ್ನು ಅನುಕರಿಸುವುದರ ಬಗ್ಗೆ ಮಾಸ್ತಿಯವರು ವಿರೋಧವನ್ನು ವ್ಯಕ್ತಪಡಿಸುತ್ತಾರೆ. ಏಕೆಂದರೆ "ನಮ್ಮ ಸಾಹಿತ್ಯ ಸಂಪತ್ತು ಹೇರಳವಾಗಿರುವಾಗ ಇದನ್ನು ಕಡೆಗಣ್ಣಿನಿಂದ ಕಂಡು ಬೇರೆಯವರ ಬೆನ್ನು ಹತ್ತಿ ಹೋಗುವ ಚಪಲವೇಕೆ? ನಮ್ಮ ಧರ್ಮ, ನಮ್ಮ ಸಂಸ್ಕೃತಿಗಳನ್ನು ಕಾಲಕಾಲಕ್ಕೆ ತಿದ್ದುವ, ವೃದ್ಧಿಗೊಳಿಸುವ ಸಮಾಜದ ಉನ್ನತಿಯನ್ನು ಸಾಧಿಸುವ ಸಾಹಿತ್ಯ ನಮ್ಮದಾಗಬೇಕು. ಪಾಶ್ಚಾತ್ಯರು ನಮ್ಮದೇನೂ ಅನುಕರಿಸುತ್ತಿಲ್ಲ ಅವರಿಗೆ ಗೊತ್ತು ಅವರ ಸಂಸ್ಕೃತಿಗೆ, ಸಮಾಜೋನ್ನತಿಗೆ ಅಗತ್ಯವಾದ ಸಾಹಿತ್ಯ ಹೇಗಿರಬೇಕೆಂದು ಅದರಂತೆ ಅವರು ರಚಿಸುತ್ತಾರೆ"[೮] ಎಂಬುದಾಗಿ ಹೇಳಿದಂತಹ ಮಾಸ್ತಿಯವರ ಮಾತುಗಳನ್ನು ಇಲ್ಲಿ ಸ್ಮರಿಸಲಾಗಿದೆ.

ಮಾಸ್ತಿಯವರು ಚನ್ನಬಸವನಾಯಕನಲ್ಲಿರುವ ಎರಮ್ಮಾಜಿಯ ಬಗ್ಗೆ, ಐತಿಹಾಸಿಕತೆಯ ಬಗ್ಗೆ, ನೈಜತೆಯ ಅಲ್ಲಿನ ಪಾತ್ರಗಳಿಗೂ ಘಟನೆಗಳ ಬಗ್ಗೆ ವಿವರಿಸಿರುವುದನ್ನು ಶಾಸ್ತ್ರಿಗಳು ಇಲ್ಲಿ ತಿಳಿಸುತ್ತಿದ್ದಾರೆ. ಹಾಗೂ ಬ್ರಾಹ್ಮಣ ಎಂಬುದರ ಬಗ್ಗೆ ಹೇಳುತ್ತಾ ನಾನು ಬ್ರಾಹ್ಮಣ ಎಂದುಕೊಂಡೇ ಇಲ್ಲ. ಬ್ರಾಹ್ಮಣ ಅಥವಾ ಆ ಬ್ರಾಹ್ಮಣ ಎಂಬುದು ಒಂದು ವಿಶಿಷ್ಟ ಸಾಧನೆಯಿಂದ ಲಭಿಸತಕ್ಕ ಒಂದು ಮಜಲು ಎಂದು ಕೊಂಡಿದ್ದರು.[೯] ಹಾಗೂ ಆ ಬ್ರಾಹ್ಮಣ್ಯದಿಂದಾಗಿಯೇ ಅವರು ನಿತ್ಯವೂ ಸ್ನಾನ ಮಾಡುವುದು. ಶುಚಿಯಾದ ಬಟ್ಟೆ ತೊಡುವುದು, ಹೊರಗಿನ ಶುದ್ಧಿ, ಒಳಗಿನ ಶುದ್ಧಿಗೆ ಪ್ರಯತ್ನಿಸುತ್ತಿರುವುದಾಗಿ ಮಾಸ್ತಿಯವರು ಇಲ್ಲಿ ಚರ್ಚಿಸಿರುವುದನ್ನು ಶಾಸ್ತ್ರಿಗಳು ತಿಳಿಯಪಡಿಸುತ್ತಾರೆ.

ಮಾಸ್ತಿಯವರು ಸಾಯುವಂತಹ ಸ್ಥಿತಿಯಲ್ಲಿದ್ದರೂ ತಮಗೆ ನಮಸ್ಕಾರ ಮಾಡಿದಂತವರಿಗೆ ಕೈಯೆತ್ತಿ ನಮಸ್ಕಾರ ಮಾಡುವುದನ್ನು ಮಾತ್ರ ಮರೆಯುವುದಿಲ್ಲ ಇಂತಹ ವ್ಯಕ್ತಿತ್ವವನ್ನು ಕೃಷ್ಣ ಶಾಸ್ತ್ರಿಗಳು ಇಲ್ಲಿ ನೆನೆಯುತ್ತಿದ್ದಾರೆ.

### ಡಿ.ವಿ.ಜಿ

ಕೃಷ್ಣಶಾಸ್ತ್ರಿಯವರು ಹತ್ತಿರದಿಂದ ಕಂಡಂತಹ ಸಾಹಿತಿಗಳಲ್ಲಿ ಡಿ.ವಿ.ಜಿ ಯವರೂ ಸಹ ಒಬ್ಬರು ಇವರನ್ನು ಹಲವಾರು ಸಂದರ್ಭದಲ್ಲಿ ಈ ಕೆಳಗಿನಂತೆ ಶಾಸ್ತ್ರಿಗಳು ನೆನೆಯುತ್ತಿದ್ದಾರೆ.

ತಳುಕಿನ ಪ್ರೊ.ವೆಂಕಣ್ಣಯ್ಯನವರ ಸ್ಮಾರಕೋತ್ಸವದಲ್ಲಿ ಡಿ.ವಿ.ಜಿಯವರು ಅಯ್ಯಣ್ಣನವರ ಬಗ್ಗೆ ಹೇಳಿದಂತಹ ನುಡಿಗಳನ್ನು ಇಲ್ಲಿ ವಿವರಿಸಲಾಗಿದೆ. ಅಯ್ಯಣ್ಣ 'ಮಂಕುತಿಮ್ಮನ ಕಗ್ಗ' ಕೃತಿಯ ಬಗ್ಗೆ ಹೊಂದಿದಂತಹ ನಿಲುವುಗಳನ್ನು ಪ್ರಸ್ತಾಪಿಸುತ್ತ, "ಈ ಕೃತಿಯು ಕೇವಲ ಬುದ್ಧಿವಂತರಿಗೆ ಮಾತ್ರ ಅರ್ಥವಾಗುತ್ತದೆ ಹೊರತು ಹಳ್ಳಿಯ ಮಂಕರಿಗಲ್ಲ, ಸರ್ವಜ್ಞ ಹಳ್ಳಿಗರಿಗೂ ಎಟಕುತ್ತಾನೆ, ಆದರೆ ಮಂಕುತಿಮ್ಮನ ಭಾಷೆ ಕಠಿಣ ಎಂಬುದಾಗಿ ಹೇಳುತ್ತಾನೆ"[೭] ಇಂತಹ ಅಯ್ಯಣ್ಣನ ನಿಲುವುಗಳನ್ನು ಸ್ವೀಕರಿಸಿದ್ದನ್ನು ಮಾಸ್ತಿಯವರ ಮೂಲಕ ಕೃಷ್ಣಶಾಸ್ತ್ರಿಗಳು ನೆನೆಯುತ್ತಿದ್ದಾರೆ. ಹಾಗೂ ಡಿ.ವಿ.ಜಿಯವರು ಸೀತಾರಾಮಶಾಸ್ತ್ರಿಗಳ ಬಗ್ಗೆ ಹೊಂದಿದಂತಹ ನಿಲುವನ್ನು ಇಲ್ಲಿ ಹೇಳುತ್ತಾರೆ. ಸೀತಾರಾಮಶಾಸ್ತ್ರಿಗಳು ಹೊರಗೆ ಮ್ಯಾಥ್‌ಮ್ಯಾಟಿಕ್ಸ್ ಒಳಗೆ ವಾಲ್ಮಿಕಿ ಎಂದು ಹೇಳಿದ್ದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ತಿಳಿಸಿದ್ದಾರೆ. ಡಿ.ವಿ.ಜಿಯವರು ಲಕ್ಷ್ಮೀಶನ ಬಗ್ಗೆ ಅತೀವ ಅಭಿಮಾನವನ್ನು ಹೊಂದಿದವರಾಗಿದ್ದು ಇವರು ಲಕ್ಷ್ಮೀಶನು ಹುಟ್ಟಿದ ದೇವನೂರಿನ ಹಾಳುಮನೆಯಿಂದ ಕಲ್ಲುಗಳ ಚೂರುಗಳನ್ನು ತೆಗೆದುಕೊಂಡು ತಮ್ಮ ಮನೆಯಲ್ಲಿ ಸಂಗ್ರಹಮಾಡಿದ್ದರು. ಇವುಗಳಿಂದ ಮಾಸ್ತಿಯವರು ತಮ್ಮ ಸಂಗಡ ಲಕ್ಷ್ಮೀಶನೂ ಇದ್ದಾನೆ ಎಂಬುದಾಗಿ ಬಾವಿಸಿರುವುದನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

"ಹಿರಣ್ಮಯೇನ ಪಾತ್ರೇನ ಸತ್ಯಸ್ಯಾಪಿಹಿತಂ ಮುಖಂ ತತ್‌ತ್ವಂ ಪೂಕ್ಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಿಯೇ" ಎಂಬ ಶ್ಲೋಕವನ್ನು ಡಿ.ವಿ.ಜಿ.ಯವರು ವಿವರಿಸುತ್ತಾ ಮಾನವ ಹೊನ್ನಿಗಾಗಿ ತನ್ನ ಮಾನವತೆಯನ್ನೇ ದೂರ ಒಗೆಯುತ್ತಾನೆ. ಇಲಿ, ಹುಲಿ, ಹಾವು, ಹಂದಿ ನಾಯಿಗಳಾಗಿ ವರ್ತಿಸುತ್ತಾನೆ[೮] ಎಂದು ಹೇಳಿದುದನ್ನು ಕೃಷ್ಣಶಾಸ್ತ್ರಿಗಳು ಜ್ಞಾಪಿಸಿಕೊಳ್ಳುತ್ತಿದ್ದಾರೆ.

ಶ್ರೀ ಜಯಚಾಮರಾಜ ಒಡೆಯರು ಡಿವಿಜಿಯವರ ಮೇಲೆ ಇಟ್ಟಂತಹ ಅಪಾರವಾದ ಅಭಿಮಾನವನ್ನು ಇಲ್ಲಿ ವಿವರಿಸಲಾಗಿದೆ. ಹಾಗೂ ಒಡೆಯರು ಒಪ್ಪಿಸಿದಂತಹ ಕೆಲಸವನ್ನು ಸಂತೋಷದಿಂದ ನೆರವೇರಿಸಿದ್ದನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಿದ್ದಾರೆ.

ಡಿ.ವಿ.ಜಿಯವರಿಗಿದ್ದ ಉತ್ತಮ ವ್ಯಕ್ತಿತ್ವ ಮತ್ತು ಅವರಿದ್ದ ಸಂಗೀತಶಾಸ್ತ್ರದಲ್ಲಿನ ಪೂರ್ಣ ಪಾಂಡಿತ್ಯವನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

### ವಿ.ಸೀತಾರಾಮಯ್ಯ

ಶಾಸ್ತ್ರಿಗಳು ವಿ.ಸೀತಾರಾಮಯ್ಯನವರ ಜೊತೆ ಹೆಚ್ಚಿನ ಒಡನಾಟವನ್ನು ಹೊಂದಿದ್ದರು. ಇವರ ಒಡನಾಟದಿಂದ ಹಲವಾರು ವಿಶೇಷವಾದ ವ್ಯಕ್ತಿತ್ವವನ್ನು ಕಂಡು ತಮ್ಮಲ್ಲಿ ಅಳವಡಿಸಿಕೊಂಡಿದ್ದಾರೆ.

ವೀಸೀಯವರು ತಮ್ಮ ಮನಸ್ಸಿನಲ್ಲಿ ಅಪರಾಧಿ ಭಾವನೆಯನ್ನು ಹೊಂದಿದ್ದರು, ಅದಕ್ಕೆ ಕಾರಣವೇನೆಂದರೆ ಚಂದ್ರಶೇಖರಶಾಸ್ತ್ರಿಗಳಿಗೆ ಮಾಡಿದಂತಹ ರಾಗಿಮುದ್ದೆ ಅವರೇಕಾಳು ಹುಳಿ ಊಟ ಮಾಡಿಸದೇ ಹಾಗೆಯೇ

ಮರೆತು ಕಳುಹಿಸಿದ್ದುದು. ಇಂತಹ ವೀಸೀರವರ ನವಿರಾದ ಮೃದ ಹೃದಯದ ಹಿರಿಯರನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

ಡಾ.ಆರ್.ಶೇಷಶಾಸ್ತ್ರಿಯವರು ಡಾಕ್ಟರೇಟ್ ಪದವಿಯನ್ನು ಪಡೆದಿದ್ದರು ಎಂಬುದು ಗೊತ್ತಿಲ್ಲದೆ ಅವರನ್ನು ಎಸ್.ಎಸ್.ಎಲ್.ಸಿ, ಹಾಗೂ ಪಿ.ಯು.ಸಿ ಪಾಸಾಗಿದೆಯೇ ಎಂಬುದರ ಬಗ್ಗೆ ವೀಸೀ ಪ್ರಶ್ನೆ ಮಾಡಿದ್ದರು. ನಂತರದಲ್ಲಿ ತನ್ನ ತಪ್ಪಿನ ಅರಿವಿನಿಂದಾಗಿ ತಾನು ಮಹಾಪರಾಧವನ್ನು ಮಾಡಿದ್ದೇನೆ ಎಂದು ಶೇಷಶಾಸ್ತ್ರಿಯವರನ್ನು ಕ್ಷಮೆ ಕೇಳಿದಂತಹ ವೀಸೀರವರ ದೊಡ್ಡ ಮನಸ್ಸನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ನೆನಪು ಮಾಡಿಕೊಳ್ಳುತ್ತಿದ್ದಾರೆ.

ವೆಂಕಣ್ಣಯ್ಯನವರ ಮನೆಗೆ ಒಮ್ಮೆ ವೀಸಿ ರವರು ಊಟಕ್ಕೆ ಹೋಗಿದ್ದು, ಇದರಿಂದಾಗಿ ವೀಸೀಯವರು ಅವರ ಮನೆ ಸಾಲವನ್ನು ತೀರಿಸಿದ್ದು ವೆಂಕಣ್ಣಯ್ಯನವರ ಮನೆಯಲ್ಲಿ ಊಟ ಮಾಡಿದ್ದು ತನ್ನ ಸ್ವಂತ ಮನೆಯಲ್ಲಿ ಮಾಡಿದ ರೀತಿ ಹಾಗಿತ್ತು” ಎಂದು ತೀರ್ಮಾನಿಸಿದುದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸುತ್ತಿದ್ದಾರೆ.

ವೀಸೀಯವರ ಹೃದಯವೈಶಾಲ್ಯತೆ, ಪ್ರೀತಿ, ವಾತ್ಸಲ್ಯಗಳನ್ನು ಕಣ್ಣಾರೆ ಕಂಡಂತಹ ಶಾಸ್ತ್ರಿಗಳು ಅವರ ಬಗ್ಗೆ ತಾವು ಹೊಂದಿದಂತಹ ವಿವರಗಳನ್ನು ಇಲ್ಲಿ ಬಿಚ್ಚಿಟ್ಟಿದ್ದಾರೆ.

**ಜಿ.ಪಿ.ರಾಜರತ್ನಂ**

ರಾಜರತ್ನಂ ಬಗ್ಗೆ ಕೃಷ್ಣಶಾಸ್ತ್ರಿಗಳು ಉತ್ತಮ ಭಾವನೆಯನ್ನು ಹೊಂದಿದ್ದರು. ಅವರನ್ನು ಇಲ್ಲಿ ಹಲವಾರು ಸಂದರ್ಭಗಳಲ್ಲಿ ನೆನಪು ಮಾಡಿಕೊಂಡಿದ್ದಾರೆ.

ಜಿ.ಪಿ.ಪ್ರಕಾರ ಕೀಚಕ ದುಷ್ಟ ದುರ್ಮಾರ್ಗಿಯಲ್ಲ, ಅವನು ಬರೀ ಭಯಂಕರ ಅಲ್ಲ ಅರಿಭಯಂಕರ, ವೀರ, ಧೀರ, ಎಂಬ ನಿಲುವನ್ನು ಹೊಂದಿದ್ದರು. ಕೈಲಾಸಂ ಪ್ರಕಾರ ಕೀಚಕ ಕಾಮಿ ಅಲ್ಲ, ಇಂದ್ರಿಯ ನಿಗ್ರಹವುಳ್ಳವನು, ಆಜನ್ಮ ಬ್ರಹ್ಮಚಾರಿ, ದೀನರಿಗೆ ಆರ್ತರಿಗೆ ಬಂಧು, ಧರ್ಮವಿಷ್ಟ, ಸುಸಂಸ್ಕೃತ, ಕಲಾಕೋವಿದ ಎಂಬುದಾಗಿ ಶಾಸ್ತ್ರಿಗಳು ಇಲ್ಲಿ ಪ್ರಸ್ತಾಪಿಸಿದ್ದಾರೆ. ಕೈಲಾಸಂ ಪ್ರಕಾರ ಕೀಚಕ ಜೀವನದಲ್ಲಿ ಉನ್ನತ ಗುಣ ಸಂಪನ್ನ, ಪರಹಿತಕ್ಕಾಗಿಯೇ ಸಾಧು ಸಜ್ಜನರ ರಕ್ಷಣೆಗಾಗಿಯೇ ಬದುಕಿದವನು ಎಂದು ಜಿ.ಪಿ.ಯವರು ಹೇಳುತ್ತಾ, "ಕೈಲಾಸಂ ಕಂಡ ಕೀಚಕ ಬೇರೆ, ನಾವೆಲ್ಲಾ ಕಂಡ ದುರುಳ ಕೀಚಕನೇ ಬೇರೆ ಎಂದು"[೧೦] ವಿವರಿಸಿದ್ದನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಿದ್ದಾರೆ.

ಜಿ.ಪಿ.ರಾಜರತ್ನಂ ಹಾಗೂ ತಾವುಗಳು ಬಯಲುಗಾಡಿ ಅಥವಾ ಎತ್ತಿನ ಗಾಡಿಯಲ್ಲಿ ಪ್ರಯಾಣ ಮಾಡಿದ್ದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

"ದುಶ್ಶಾಸನನ ರಕ್ತರಕ್ತವದನಂ" ಎಂಬ ವಾಕ್ಯದ ಅರ್ಥದ ಬಗ್ಗೆ ಚೆನ್ನಾಗಿ ತಿಳಿದ ಶ್ರೀನಿವಾಸರಾಯರ ಅಗಾಧ ಪಾಂಡಿತ್ಯವನ್ನು ಜಿ.ಪಿ.ರವರ ಮೂಲಕ ಶಾಸ್ತ್ರಿಗಳು ಇಲ್ಲಿ ಜ್ಞಾಪಿಸಿಕೊಳ್ಳುತ್ತಿದ್ದಾರೆ.

**ದ.ರಾ.ಬೇಂದ್ರೆ**

ಬೇಂದ್ರೆಯವರನ್ನು ಕೃಷ್ಣಶಾಸ್ತ್ರಿಗಳು ಸಾಹಿತಿಗಳ ಸ್ಮೃತಿಯಲ್ಲಿ ತುಂಬಾ ಚೆನ್ನಾಗಿ ನೆನಪಿಸಿಕೊಂಡಿದ್ದಾರೆ. ಕಾಶಿಯ ಜಂಗಮವಾಡಿಯಲ್ಲಿ ಬೇಂದ್ರೆಯವರಿಗೆ ಶ್ರೀಜಯ ವಿಭವ ಮುರುಘರಾಜೇಂದ್ರ ಸ್ವಾಮಿಗಳು

ಚೆಂಡು ಹೂವಿನ ಹಾರವನ್ನು ಹಾಕಿದ್ದುದನ್ನು, ಹಾಗೂ "ಚೆಂಡು ಹೂವಿನ ಹಾರವನ್ನು ದಕ್ಷಿಣ ಕರ್ನಾಟಕದಲ್ಲಿ ಕತ್ತೆಗಳಿಗೆ ಹಾಕಲಾಗುತ್ತದೆ."[೧೨] ಎಂಬುದನ್ನು ಸ್ಮರಿಸುತ್ತ ನಗುವುದನ್ನು ಇಲ್ಲಿ ದಾಖಲಿಸಲಾಗಿದೆ.

ಸಾಹಿತ್ಯ ಅಂಬೋದು ಮಿಠಾಯಿ ಇದ್ದಾಂಗ, ಜಗೀತಾ ಹೋದರೆ ರುಚಿಕೊಡ್ತಾ ಹೋಗ್ತದಾ ಎಂದು ಬೇಂದ್ರೆಯವರು ಸಾಹಿತ್ಯದ ಬಗ್ಗೆ ಹೇಳಿದ್ದನ್ನು ಹಾಗೂ ಇವರ ಸಂಗೀತದಲ್ಲಿ ಅಥವಾ ಹಾಡಿನಲ್ಲಿ ತಾಳ, ಲಯಗಳ ಗಮ್ಮತ್ತು ಇರುತ್ತದೆ. ಕವನದ ಒಳ ತಿರುಳು ಭಾವ, ರಸ, ನವಿರಾದ ಹಾಸ್ಯ, ಇತ್ಯಾದಿಗಳೊಂದಿಗೆ ನೇರವಾಗಿ ಮನಮುಟ್ಟುವಂತಿರುತ್ತದೆ ಎಂದು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

ಬಿ.ಎನ್.ಚಿನ್ನಪ್ಪನು ಪುಣ್ಯಕೋಟಿ ಗೋವಿನ ಹಾಡನ್ನು ಹಾಡಿದ್ದನ್ನು ಕೇಳಿ ಬೇಂದ್ರೆಯವರು ಕಲಾವಿದ ಅಂದರೆ ಹೀಗಿರಬೇಕು ಎಂದು ಹೇಳಿದ್ದನ್ನು ಶಾಸ್ತ್ರಿಯವರು ಇಲ್ಲಿ ವಿಶ್ಲೇಷಿಸಿದ್ದಾರೆ.

ತ.ರಾ.ಸುರವರು ಬೇಂದ್ರೆಯವರ ಕಾಲಿಗೆ ಬೀಳಲು ಹೋದಾಗ, "ಕಾಲೊಂದು ಮುಟ್ಟಿದರೆ ಸಾಕೇನು ಈಗ ನೋಡು ಮೈಯೆಲ್ಲ ಮುಟ್ಟಿದಾಯ್ತು" ಎಂದು ಬೇಂದ್ರೆಯವರು ಬಿಗಿಯಾಗಿ ಅಪ್ಪಿಕೊಳ್ಳುತ್ತಾರೆ. ಹಾಗೂ "ಇದರ ಮಜ ಕಾಲುಮುಟ್ಟಿದರಾಗಲೀ, ಕೈ ಕುಲುಕಿ ಹಲೋ ಹಲೋ ಅಂದರಾಗಲೀ ಬರುವುದಿಲ್ಲ ಅದು ಹಲೋ ಹಲೋ ಆಗಬಹುದು (ಅಲ್ಲ ಎಂಬಂತೆ ಕೈ ತಿರುವುತ್ತ) ಅಲ್ಲೋ ಅಲ್ಲೋ ಆಗಬಹುದು ಎಂದು, ಅದು ಭಾರತೀಯರಿಗೆ ಹೊಸದೇನಲ್ಲ ಆದರೂ ಆಲಿಂಗನದಾಗ ಆತ್ಮಲಿಂಗನ ದರುಶನ ಆದರೂ ಆದೀತು"[೧೩] ಎಂಬುದಾಗಿ ಬೇಂದ್ರೆಯವರು ಹೇಳಿದ್ದನ್ನು ಮಾಸ್ತಿಯವರು ಇಲ್ಲಿ ವಿವರಿಸಿದ್ದಾರೆ.

ಚಿನ್ನಪ್ಪನ ಮೂಕನ ಪಾತ್ರ, ವಾಸುದೇವರಾಯನ ಕುರುಡನ ಪಾತ್ರವನ್ನು ಕಂಡು ಜನರು ಸ್ವೀಕರಿಸಿದ ರೀತಿಯನ್ನು ಬೇಂದ್ರೆಯವರು ಪ್ರತಿಕ್ರಿಯಿಸಿದ ರೀತಿಯನ್ನು ಇಲ್ಲಿ ವಿವರಿಸಲಾಗಿದೆ. ಬೇಂದ್ರೆಯವರು ಕೇವಲ ನಗುವ ಜನರನ್ನು ಕಂಡು, "ಕೇವಲ ನಗು ಮಾತ್ರ ಸಾಲದು ಜೊತೆಯಲ್ಲಿ ಅಳು ಕೂಡ ಇರಬೇಕು" ಎಂದು ವಿಶ್ಲೇಷಿಸಿದ್ದಾರೆ. ಆದ್ದರಿಂದಲೇ "ಮಗುವು ಹುಟ್ಟಿದ ತಕ್ಷಣ ಅಳುತ್ತದೆ, ಕೇವಲ ಬಾಯಿಂದ ನೀರು ಬಂದರೆ ಸಾಲದು ಕಣ್ಣೀರು ಬರಲಿ, ಹಾಗಂಥ ಮೂರು ಹೊತ್ತು ಅಳ್ತಾ ಕೂಡ್ತಾ ಇರೋದಲ್ಲ ಅಗತ್ಯ ಬಂದಾಗ ಅಗತ್ಯವಿದ್ದಷ್ಟು ಅಳೋಣ,"[೧೪] ಎಂಬುದಾಗಿ ಬೇಂದ್ರೆಯವರು ಪ್ರತಿಕ್ರಯಿಸಿದನ್ನು ಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

ಹಳ್ಳಿಗಳಲ್ಲಿ ಹೆಣ್ಣು ಮಕ್ಕಳ ಕೋಲಾಟವನ್ನು ವೀಕ್ಷಿಸಿದ ಬೇಂದ್ರೆಯವರು, "ಹೆಂಗಸರೂ ಅಂಬೋ ತಾರತಮ್ಯ ಬಿಟ್ಟು ಬೀದಿಯಲ್ಲಿ ನಿಂತು ಹಾಡ್ಕೊತಾ, ಕುಣಿಕೋತಾ ಯಾವುದೇ ಥಳಕು, ಅಳಕು ಇಲ್ಲದ್ದಾಂಗ ಉಲ್ಲಾಸ ಪಡೋಕಾಲ ಬಂದಾಗ ನಮಗೆ ನಿಜವಾದ ಸಹಜವಾದ ಸಂಸ್ಕೃತಿ ಸಿಕ್ಯಾಂಗ, ಎಲ್ಲಿ ಸಂಕೋಚದ ಆವರಣ ಬೆಳೆಸ್ಕೋತ ಅಸಹಜದ ಕಡೆ ಓಡಿ ಕೃತ್ಯದ ಲೋಕ ಅದಲ್ಲ ಎಂದು ಬೇಂದ್ರೆಯವರ ಮೂಲಕ ಶಾಸ್ತ್ರಿಗಳು ಇಲ್ಲಿ ವಿಶ್ಲೇಷಿಸಿದ್ದಾರೆ.

ಬೇಂದ್ರೆಯವರಿಗೆ ಪ್ರಶಸ್ತಿಗಳ ಬಗ್ಗೆ ತುಂಬಾ ತಿರಸ್ಕಾರದ ಮನೋಭಾವ, ಪ್ರಶಸ್ತಿಗಳು ಈಗ ಹೆಚ್ಚಾಗಿ ರಾಜಕೀಯ ಮತ್ತು ಹಣದ ಪಾಲಾಗಿವೆ ಎಂಬುದಾಗಿ, "ಕೇವಲ ಪ್ರಶಸ್ತಿ ಬಂದಿರುವುದರಿಂದಲೇ ನನ್ನನ್ನು ಗುರುತಿಸಿ, ಇನ್ನೂ ಹಲವಾರು ರೀತಿಯ ಪ್ರಶಸ್ತಿಗಳನ್ನು ನೀಡುತ್ತಿದ್ದಾರೆ. ಅಂದರೆ ಪ್ರಶಸ್ತಿಗೆ ಎಷ್ಟೊಂದು ಪ್ರಶಸ್ತಿ ಬರುತ್ತವೆ" ಎಂಬುದಾಗಿ ಇಲ್ಲಿ ವಿಶ್ಲೇಷಿಸುತ್ತಾರೆ.

ಬೇಂದ್ರೆಯವರು ಚಂದ್ರಶೇಖರಶಾಸ್ತ್ರಿಗಳ ಜೀವನದ ಶೈಲಿ, ರೀತಿ, ನೀತಿ, ಅವರ ಹಾಡುಗಳ ರಚನೆ, ಶೈಲಿ, ವಿನೋದ, ವಿದ್ವತ್ತು, ಜೀವನದ ಹದವನ್ನೆಲ್ಲವನ್ನೂ ಚೆನ್ನಾಗಿ ಬಲ್ಲವರೆಂದು ಹೇಳಿದ್ದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ತಿಳಿಯಪಡಿಸಿದ್ದಾರೆ.

ಬೇಂದ್ರೆಯವರಿಗೆ ಜಾನಕಮ್ಮ ಹಾಗೂ ಸೀತಾರಾಮಶಾಸ್ತ್ರಿಗಳು ಹೆಚ್ಚಿನ ಪರಿಚಯ ಇದ್ದುದು ಇವರುಗಳು ಬರೆದಂತಹ ಸಾಹಿತ್ಯದಿಂದಾಗಿ ಎಂಬುದಾಗಿ ಬೇಂದ್ರೆಯ ಮೂಲಕ ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸುತ್ತಿದ್ದಾರೆ. ಜಾನಕಮ್ಮ ಬೇಂದ್ರೆಯವರಿಗೆ ಕವನ ರೂಪದ ಪತ್ರವನ್ನು ಬರೆದುದನ್ನು ಹಾಗೂ ಪ್ರತ್ಯುತ್ತರವಾಗಿ ಇವರೂ ಕವನ ರೂಪದಲ್ಲಿ ಉತ್ತರಿಸಿದುದನ್ನು ಶಾಸ್ತ್ರಿಗಳು ಬೇಂದ್ರೆಯ ಮೂಲಕ ನೆನಪಿಸಿಕೊಳ್ಳುತ್ತಾರೆ.

## ದೇವುಡು ನರಸಿಂಹಶಾಸ್ತ್ರಿಗಳು

ತಮ್ಮನ್ನು ರಾಷ್ಟ್ರರಕ್ಷಣೆಗಾಗಿ ಅರ್ಪಿಸಿಕೊಂಡಿದ್ದನ್ನು ಹಾಗೂ ದೇವುಡುರವರು ತಮ್ಮ ಸರ್ಕಾರಿ ಹೈಸ್ಕೂಲ್ ಮುಖ್ಯೋಪಾಧ್ಯಾಯರ ಸ್ಥಾನಕ್ಕೆ ರಾಜಿನಾಮೆ ನೀಡಿ ಗಾಂಧೀಜಿ ತತ್ವಗಳ ಅನುಯಾಯಿ ಆಗಿ ಅವರ ಸಮೂಹದಲ್ಲಿ ಸೇರಿಕೊಂಡಿದ್ದನ್ನು ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

ಶಾಸ್ತ್ರಿಗಳೂ ಕೂಡ ಇವರ ಸಮೂಹದಲ್ಲಿ ತಮ್ಮನ್ನು ರಾಷ್ಟ್ರ ರಕ್ಷಣೆಗೆ ಅರ್ಪಿಸಿಕೊಂಡಿದ್ದರು. ೧೯೩೭ರಲ್ಲಿ ನಡೆದ 'ನಾರೀಮನ್ ಗಲಾಟೆ'ಯಲ್ಲಿ ಜನಸ್ತೋಮವನ್ನು ಉದ್ದೇಶಿಸಿ ಮಾತನಾಡುತ್ತಿದ್ದ ದೇವುಡುರವರನ್ನು ಪೋಲೀಸರು ಮನಬಂದಂತೆ ಥಳಿಸಿದರು, ಅವರು ಅಲ್ಲಿಯೇ ಪ್ರಜ್ಞಾಹೀನರಾಗಿ ಬಿದ್ದುದನ್ನು[೧೫] ಕಂಡು ಶಾಸ್ತ್ರಿಗಳು ಗಾಬರಿಯಾಗಿದ್ದುದನ್ನು ಇಲ್ಲಿ ವಿವರಿಸಿದ್ದಾರೆ.

ರಾಮಾಯಣವು ಕೇವಲ ಒಂದು ಕಟ್ಟುಕತೆಯಾಗಿರದೆ ಸರ್ವಕಾಲದಲ್ಲೂ, ಸರ್ವರಿಗೂ ಅಗತ್ಯವಾದ ಸರ್ವರೂ ಅರಿತು ನಡೆಯಬೇಕಾದ ಮಹಾಕಾವ್ಯ, ಮಹಾನ್ ಆದರ್ಶಪುರುಷನೊಬ್ಬನ ಜೀವನ ಸಾಧನೆ, ಧರ್ಮ ಮತ್ತು ಸಂಸ್ಕೃತಿಗಳನ್ನು ಸಾರುವ ಒಂದು ವಿಚಾರಧಾರೆ, ಇದು ಮಹರ್ಷಿ ವಾಲ್ಮಿಕಿಯು ತನ್ನ ತಪಸ್ಸು, ಚಿಂತನೆ, ಜೀವನ ವಿಧಾನಗಳನ್ನು ಎರಕ ಹೊಯ್ದು ಮಾನವ ಕುಲಕ್ಕೆ ಕೊಟ್ಟಿರುವ ಅನರ್ಘ್ಯ ಕಾಣಿಕೆ ಎಂದ ದೇವುಡುರವರನ್ನು ಇಲ್ಲಿ ಶಾಸ್ತ್ರಿಗಳು ಪ್ರಶಂಸಿಸಿದ್ದಾರೆ.

ಒಮ್ಮೆ ಹಿರಿಯೂರಿನ ಶಾಲೆಯಲ್ಲಿ ಪ್ರಹ್ಲಾದ, ಅಭಿಮನ್ಯು, ಗೌತಮಬುದ್ಧ ಕತೆಗಳ ಮೂಲಕ ಮಕ್ಕಳಿಗೆ ತಿಳಿಸಬೇಕಾದ ರೀತಿ-ನೀತಿಗಳ ಆದರ್ಶಗಳನ್ನು ಬೋಧಿಸಿ ಅಂತಹ ವ್ಯಕ್ತಿತ್ವವನ್ನು ಚಿಕ್ಕ ಮಕ್ಕಳು ಈಗಿನಿಂದಲೇ ರೂಢಿಸಿಕೊಳ್ಳಲು ಸಂಕಲ್ಪ ಮಾಡಬೇಕೆಂದು ದೇವುಡುರವರು ಉಪದೇಶಿಸಿದ್ದುದನ್ನು[೧೬] ಕೃಷ್ಣಶಾಸ್ತ್ರಿಗಳು ಇಲ್ಲಿ ಸ್ಮರಿಸಿದ್ದಾರೆ.

ಒಟ್ಟಾರೆಯಾಗಿ ಬೆಳಗೆರೆ ಕೃಷ್ಣಶಾಸ್ತ್ರಿಗಳ ಈ "ಸಾಹಿತಿಗಳ ಸ್ಮೃತಿ" ಕೃತಿಯನ್ನು ಕೇವಲ ವ್ಯಕ್ತಿ ಚಿತ್ರಗಳು ಎಂದು ಪರಿಗಣಿಸಿದರೆ ಸಾಲದು, ಅವು ಕಟ್ಟಿಕೊಡುತ್ತಿರುವ ಸಂದರ್ಭ, ಪ್ರತಿಪಾದಿಸುತ್ತಿರುವ ಮೌಲ್ಯ ಜಗತ್ತು, ಶೈಲಿಗಳನ್ನು ಗಮನಿಸಬೇಕು, ಅಂದರೆ ಶಾಸ್ತ್ರಿಗಳು ಕೇವಲ ವ್ಯಕ್ತಿ ಚಿತ್ರಗಳನ್ನು ಮಾತ್ರ ಕಟ್ಟಿಕೊಡುತ್ತಿಲ್ಲ; ಅದರಾಚಿನ ಜಗತ್ತನ್ನು ಕಟ್ಟಿಕೊಡುತ್ತಿದ್ದಾರೆ. ಹಾಗೆ ಕಟ್ಟಿಕೊಡುವ ರೀತಿಯಲ್ಲಿಯೂ ವಿಶೇಷತೆ ಇದೆ. ಉದಾ:- ಬೇಂದ್ರೆಯವರಂತಹ ಕವಿಯ ಜೊತೆಗಿನ ಅನುಭವವನ್ನು ಕೇವಲ ಘಟನೆಗಳೆಬಂತೆ ನಿರೂಪಿಸದೆ ಬೇಂದ್ರೆಯವರ ನೇರ ಮಾತು, ನಡವಳಿಕೆಗಳ ಮೂಲಕ ಕಟ್ಟಿಕೊಟ್ಟಿರುವುದು ಹೆಚ್ಚು ಪರಿಣಾಮಕಾರಿಯಾಗಿದೆ, ಆಪ್ತವಾಗಿದೆ ಈ ಕ್ರಮ ವಸ್ತುವನ್ನು ವಿವರವನ್ನು ಆಕರ್ಷಕವಾಗಿಸುವುದಷ್ಟೇ ಅಲ್ಲ: ಬರವಣಿಯ ಏಕತಾನತೆಯನ್ನೂ ಮೀರಲು ಸಹಾಯಕವಾಗಿದೆ ಹೀಗಾಗಿ ಇದೊಂದು ವಿರಾಟ್ ಕಥನವಾಗಿ ಕಾಣುತ್ತದೆ.

ಈ ಕೃತಿಯಲ್ಲಿ ಕೀರ್ತಿವೆತ್ತ ಮೋಕ್ಷಗೊಂಡಂ ವಿಶ್ವೇಶ್ವರಯ್ಯನವರಿಂದ ಮೊದಲ್ಗೊಂಡು ಉದಾತ್ತ ಚರಿತರೂ ಲೋಕಪ್ರಿಯರೂ ಆದ ಚಳ್ಳಕೆರೆಯ ಬಸಣ್ಣನವರಾದಿಯಾಗಿ ಅನೇಕ ಗಣ್ಯ ವ್ಯಕ್ತಿಗಳನ್ನು ಕುರಿತ ಮನನೀಯ ಸಂಗತಿಗಳು ಗೋಚರಕ್ಕೆ ಬರುತ್ತವೆ. ಶ್ರೀಕೃಷ್ಣಶಾಸ್ತ್ರಿಗಳ ಸಂಸ್ಕೃತಿ ಸಂಪನ್ನ ವ್ಯಕ್ತಿತ್ವವು ಎಂಥದ್ದೆಂಬುದು ಇಲ್ಲಿ ವ್ಯಕ್ತವಾಗುತ್ತದೆ.

## ಅಡಿಟಿಪ್ಪಣಿ

೦೧. ಸಾಹಿತಿಗಳ ಸ್ಮೃತಿ, ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ೨೦೦೩, ಪುಟ-೬
೦೨. ಅದೇ, ಪುಟ- ೭
೦೩. ಅದೇ, ಪುಟ- ೩೫
೦೪. ಅದೇ, ಪುಟ- ೫೩
೦೫. ಅದೇ, ಪುಟ- ೫೭
೦೬. ಅದೇ, ಪುಟ- ೬೦
೦೭. ಅದೇ, ಪುಟ- ೯೨
೦೮. ಅದೇ, ಪುಟ- ೧೦೧
೦೯. ಅದೇ, ಪುಟ- ೧೨೦
೧೦. ಅದೇ, ಪುಟ- ೧೨೬
೧೧. ಅದೇ, ಪುಟ- ೧೩೫
೧೨. ಅದೇ, ಪುಟ- ೧೭೭,೧೭೮
೧೩. ಅದೇ, ಪುಟ- ೧೪೩,೧೪೪
೧೪. ಅದೇ, ಪುಟ- ೧೪೭, ೧೪೮
೧೫. ಅದೇ, ಪುಟ- ೧೮೯
೧೬. ಅದೇ, ಪುಟ- ೧೯೨

### ೩.೬. ಹಳ್ಳಿಚಿತ್ರ (ನಾಟಕ)

ಶ್ರೀಮಾನ್ ಬೆಳಗೆರೆ ಕೃಷ್ಣಶಾಸ್ತ್ರಿಗಳು ಸಾಹಿತ್ಯ ಲೋಕಕ್ಕೆ ಪರಿಚಯವಾದದ್ದು ಅವರು ರಚಿಸಿದಂತಹ 'ಹಳ್ಳಿಚಿತ್ರ' ಎಂಬ ನಾಟಕದಿಂದ. ಈ ನಾಟಕವನ್ನು ರಾಜ್ಯದ ಮೂಲೆಮೂಲೆಗಳಲ್ಲಿ ಪ್ರದರ್ಶನಗೊಳಿಸಲಾಗಿದೆ. ಶಾಸ್ತ್ರಿಯವರಿಗೆ ಹೆಚ್ಚಿನ ಕೀರ್ತಿಯನ್ನು ತಂದುಕೊಟ್ಟ ಕೃತಿ ಇದಾಗಿದೆ.

ಗ್ರಾಮೀಣ ಜನರ ವೈಷಮ್ಯ ಸಂಘರ್ಷಗಳನ್ನು ನಿವಾರಿಸುವ ಹಾಸ್ಯಮಯವೂ ಬೋಧ ಪ್ರದವೂ ಆಗಿರುವ ಹಳ್ಳಿಚಿತ್ರ ನಾಟಕವು ಜನಸಾಮಾನ್ಯರ ಮೆಚ್ಚುಗೆಗೆ ಪಾತ್ರವಾಗಿದೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದು ಹಳ್ಳಿಯ ಜೀವನವನ್ನು ರೂಢಿಸಿಕೊಂಡಿರುವ ಶಾಸ್ತ್ರಿಗಳು ಹಳ್ಳಿಗಳ ದೇಶವಾದ ಭಾರತಕ್ಕೆ ಸಹಜವಾದ ನಾಟಕಗಳನ್ನು ರಚಿಸಿ ನಾಡಿನ ಪ್ರಗತಿಗೆ ದಿತ್ಯ ಪಥವನ್ನು ಸೃಷ್ಟಿಸಿದ್ದಾರೆ. ಹಳ್ಳಿಗಳ ಉದ್ಧಾರವಾಗದ ಹೊರತು ನಾಡಿನ ಉದ್ಧಾರವಾಗದು ಎಂಬ ಸತ್ಯದ ಕಿಡಿನುಡಿಗಳಿಂದ ನಾಡನ್ನು ಎಚ್ಚರಿಸಿದ್ದಾರೆ. ಹಳ್ಳಿ ಚಿತ್ರ ನಾಟಕವು ಪ್ರೇಕ್ಷಕರನ್ನು ಸಾಕ್ಷಾತ್ತಾಗಿ ಘಟನೆಗಳು ನಡೆಯುತ್ತಿರುವ ಹಳ್ಳಿಗೆ ಕರೆದುಕೊಂಡು ಹೋಗುವಂತೆ ಭಾಸವಾಗುತ್ತದೆ. ಇದು ಮುಕ್ತಕಂಠದಿಂದ ಹೊಗಳಬೇಕಾದ ಯಶಸ್ವೀ ನಾಟಕವಾಗಿದೆ. ಹಳ್ಳಿಚಿತ್ರ ನಾಟಕವು ಹಲವಾರು ಬಾರಿ ಆಕಾಶವಾಣಿಯಲ್ಲಿ ಬಿತ್ತರಗೊಂಡಿದೆ. ಈ ನಾಟಕವನ್ನು ಸಿನಿಮಾ ಮಾಡಲು ಸಹ ತಯಾರಿ ನಡೆಸಿದ್ದರು.

ಹಳ್ಳಿಚಿತ್ರ ನಾಟಕವು ಹಲವು ವರ್ಷಗಳಿಂದ ಅನೇಕ ಕಡೆ ಅನೇಕ ಸಮಾರಂಭಗಳಲ್ಲಿ ಪ್ರದರ್ಶಿಸಲ್ಪಟ್ಟು, ಸುವರ್ಣ ಪದಕ, ಷೀಲ್ಡ್ ಮುಂತಾದ ಬಹುಮಾನಗಳನ್ನು ಪಡೆದಿದೆ. ಬೆಂಗಳೂರು, ಅಜ್ಜಂಪುರ, ತಿಪಟೂರು, ದಾವಣಗೆರೆ, ಹಾಸನ, ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಭದ್ರಾವತಿ, ಹುಳಿಯಾರ್, ಶಿರಸಿ, ದೇವನೂರು, ಸಕಲೇಶಪುರ, ಬೆಳಗೂರು ಮುಂತಾದ ಕಡೆಗಳಲ್ಲೂ ಅಭಿನಯಿಸಲ್ಪಟ್ಟು ಅನೇಕ ಬಹುಮಾನಗಳನ್ನು ಪಡೆದಿದೆ. ಹಳ್ಳಿಚಿತ್ರ ನಾಟಕದ ವಸ್ತು ಗ್ರಾಮೀಣ ಜನರ ವೈಷಮ್ಯ ಸಂಘರ್ಷಗಳನ್ನು ಕುರಿತಾದ ಹಾಸ್ಯಮಯ ಪ್ರದರ್ಶನವಾಗಿದೆ. ಹಳ್ಳಿಗಳಲ್ಲಿ ನಡೆಯುವಂತಹ ನೈಜ ಘಟನೆಗಳನ್ನು ನಾಟಕದ ರೂಪದಲ್ಲಿ ರಚಿಸಲಾಗಿದೆ. ಈ ನಾಟಕದಲ್ಲಿ ಬರುವಂತಹ ಊರಿನ ಪ್ರಮುಖ ವ್ಯಕ್ತಿಗಳ ವೈಷಮ್ಯಗಳಿಂದಾಗಿ ಸಾಮಾನ್ಯ ಜನರು ಯಾವ ರೀತಿ ಕಷ್ಟಕ್ಕೆ ತುತ್ತಾಗುತ್ತಾರೆ ಎಂಬುದರ ಬಗ್ಗೆ ಚಿತ್ರಿತವಾಗಿದೆ.

#### ಭಾಷೆ

ಈ ನಾಟಕದಲ್ಲಿ ಬಳಸಿರುವ ಭಾಷೆಯು ಚಿತ್ರದುರ್ಗ ಜಿಲ್ಲೆಯಲ್ಲಿ ಮಾತನಾಡುವಂತಹ ಹಳ್ಳಿಜನರ ಭಾಷೆಯಾಗಿದೆ. ಯಾವ ಕಾಲದ ಸಾಹಿತ್ಯವನ್ನು ನೋಡಿದರೂ ಆಡುವ ಭಾಷೆಗೂ, ಬರೆಯುವ ಭಾಷೆಗೂ ಅದನ್ನು ಎಷ್ಟು ಸುಲಭವಾಗಿ ನೈಸರ್ಗಿಕವಾಗಿ ಬರೆಯಬೇಕೆಂದು ಪ್ರಯತ್ನ ಪಟ್ಟರಲಿ ವ್ಯತ್ಯಾಸವಿದ್ದೇ ಇರುವುದೆಂದು ಗೊತ್ತಾಗುತ್ತದೆ. ಅಲ್ಲದೆ ಆಡುವಂತೆಯೇ ಸ್ವಲ್ಪವೂ ಭೇದವಿಲ್ಲದೆ ಬರೆಯುವುದು ಸಾಧ್ಯವೇ? ಹೌದು ಸಾಧ್ಯ ಎಂಬುದಾಗಿ ಶಾಸ್ತ್ರಿಯವರು ತಮ್ಮ ನಾಟಕದ ಮೂಲಕ ತೋರಿಸಿಕೊಟ್ಟಿದ್ದಾರೆ. ಈ ನಾಟಕದಲ್ಲಿ ಆಡುವ ಭಾಷೆಗೂ ಬರೆಯುವ ಭಾಷೆಗೂ ಯಾವುದೇ ಬೇಧವನ್ನು ಕಂಡುಬರದಂತೆ

ರಚಿಸಿದ್ದಾರೆ.[೧] ಶಾಸ್ತ್ರಿಗಳು ತಮ್ಮ ನಾಟಕದಲ್ಲಿ ಸುಲಭಾಕ್ಷರ ಸಂಯೋಜನ ಕ್ರಮವನ್ನು (Simplified Spelling) ಅನುಸರಿಸಿ ಬರೆದಿದ್ದಾರೆ.

**ಉದಾಹರಣೆಗೆ:-**

೦೧. ತಿಮ್ಮೇಗೌಡ: ನನ್ವೇನೈತೆ ಸ್ವಾಮಿ ನೀವ್ಯಾಣ್ಣಂಗೆ ಆ ಭೂತನ ಗುಡಿ ಕೆಂಗ್ಲಾಗೆ ಅರ್ಕಾ ಹಾಕಿದ್ವೀನಿ, ಯರಿಯಾಗೆ ಜ್ವಾಳ... ಊ... ಈರಣ್ಣನ ಗುಡಿ ತಾಕಿಗೆ ಬರೇ ಓಟು ತರ್ಕಾರಿ ಆಕಿದ್ದೀನಿ ಓಟೇ ಬರ್ಕೊಂಡ್ಬಿಡಿ.

೦೨. ತಿಮ್ಮೇಗೌಡ: ಯಂಗ್ತಿಳೀತೈತೆ ಅಮ್ಮೀಮಿ ಇದೋಟು ಸ್ವಾಮೇರ್ಗೆ

೦೩. ತಿಮ್ಮೇಗೌಡ: ಏ ತಲೆಯಿಲ್ಲೋನೇಳ್ಬೇಕು ಆ ಮಾತು ಕಂಟ್ರೋಲು, ಆಂದ್ರೆ ಯಾಪಾರಗಾರ್ರಿಗೆ ಸುಗ್ಗೀಕಾಲ ಇದ್ದಂಗೆ ಸ್ವಾಮಿ.

೦೪. ನಂಜುಂಡಪ್ಪ: ಇಲ್ಲೇ ಬಂದಿದ್ನಪ್ಪ, ಒಂದಿಷ್ಟು ಪಹಣಿ ಬರೀ ಬೇಕಿತ್ತು.

೦೫. ರಾಮೇಗೌಡ: ಯಾರನ್ನಾ ಯಾಕ್ಬೇಕು ಸ್ವಾಮಿ, ತಳದ ತಾಯಿ ನಿನಿಗೆಲ್ಲಾ ಗೊತ್ತೈತೆ ನೀನೇ ಯೇಳು ಅದರಾಗೇನೈತೋ ಅದನ್ನೇ.

೦೬. ರಾಮೇಗೌಡ: ಅಂಗಾದ್ರೆ ನಕಾಶಿ ಐತ್ರಾ ನಿಮ್ತಾವ.

೦೭. ರಾಮೇಗೌಡ: ಅವನ್ಕಡ್ಯಾಕೇ ಐತೆ? ಯಲ ಇವನಾ ಇದಕ್ಕಿಂಗೆ ಮತ್ತೇ?

೦೮. ವೀರಪ್ಪ: ನಂಜುಂಡಯ್ಯ ಅಲ್ವೇ ಮತ್ತೆ

೦೯. ಲಿಂಗಜ್ಜ: ಅದೇ ಸಾವ್ಕಾರ ನಾನೇಳೋದೂ, ನಮ್ಮಕ್ಕಳುಮರಿ ಬಾಯ್ಕಟ್ಟಿ ಓಟೂ ಕಂಡೋರ್ಪಾಲು ಮಾಡ್‌ಬೇಕಲ್ಲಾ ಅಂತಾ

೧೦. ಲಿಂಗಜ್ಜ: ಯತ್ತೋಗ್ತಾನೆ ಈ ವುಡ್ಗ

ಹೀಗೆ ಮೇಲಿನ ವಾಕ್ಯಗಳನ್ನು ಗಮನಿಸಿದಾಗ ಸುಲಭಾಕ್ಷರ ಸಂಯೋಜನ ಕ್ರಮವನ್ನು ಅನುಸರಿಸಿ ಬರೆದಿರುವುದು ಕಂಡು ಬರುತ್ತದೆ. ಬರೆದ ಭಾಷೆಯನ್ನು ಓದುವುದು ಅಭ್ಯಾಸವಿಲ್ಲದೆ ಹೇಗೆ ಅಸಾಧ್ಯವೋ ಇದೂ ಹಾಗೆ, ಅಭ್ಯಾಸವಿಲ್ಲದೇ ಹೋದರೆ ಅಸಾಧ್ಯವಾಗುವುದು.

ಹಳ್ಳಿಚಿತ್ರ ನಾಟಕದಲ್ಲಿ ಜನರು ಆಡುವಂತಹ ಭಾಷೆಗಳಲ್ಲಿ ಇಂಗ್ಲೀಷ್ ಪದಗಳ ಬಳಕೆಯನ್ನು ಹೆಚ್ಚಾಗಿ ಕಾಣುತ್ತೇವೆ. ಆದರೆ ಅವುಗಳ ಬಗ್ಗೆ ಹಳ್ಳಿ ಜನರಿಗೆ ಅರಿವೇ ಇರುವುದಿಲ್ಲ. ಉದಾಹರಣೆಗೆ

ಮರ್ಚೆಂಟ್, ಪೋಲೀಸ್, ಎಕ್ಸೈಸ್, ಕಂಟ್ರೋಲ್, ರೇಝರ್, ಮಾರ್ಕೀಟ್, ಪೌಂಟಿನ್‌ಪೆನ್, ಕೋರ್ಟ್, ಟ್ರೇನ್, ಜಡ್ಜಿ, ಹೀಗೆ ಹಲವಾರು ಇಂಗ್ಲೀಷ್ ಪದಗಳನ್ನು ತಮ್ಮ ಆಡು ಭಾಷೆಯಲ್ಲಿಯೇ ಸೇರಿಸಿಕೊಂಡು ಬಳಸುತ್ತಾರೆ.

ಈ ನಾಟಕದ ಭಾಷೆಯಲ್ಲಿ ಹ-ಕಾರಕ್ಕೆ ಬದಲಾಗಿ ಯ, ವ ಕಾರಗಳು ಬಳಸಲಾಗಿದೆ. ಉದಾಹರಣೆಗೆ:- ಹೇಳು-ಯೇಳು, ಹುಡ್ಗ-ವುಡ್ಗ[೨]

ಹಳ್ಳಿಚಿತ್ರ ನಾಟಕದಲ್ಲಿ ಹಲವಾರು ಅರಬ್ಬಿ ಭಾಷೆಗಳಲ್ಲಿನ ಪದಗಳನ್ನು ಸಹ ಬಳಸಲಾಗಿದೆ. ಉದಾಹರಣೆಗೆ-ಅಮಲ್ದಾರರು, ಶ್ಯಾನುಬೋಗರು[೪] ಇತ್ಯಾದಿ.

ಹಳ್ಳಿ ಜನರ ಭಾಷೆಯು ಹಾಗೂ ನಗರವಾಸಿಗಳ ಭಾಷೆಗೂ ಭಿನ್ನತೆಯನ್ನು ಈ ನಾಟಕದಲ್ಲಿ ಕಾಣಬಹುದು. ಹಳ್ಳಿ ಜನರ ಭಾಷೆಯು ಹಳ್ಳಿಯಲ್ಲಿ ಮಾತನಾಡುವ ಜನಸಾಮಾನ್ಯರ ಭಾಷೆಯಾಗಿದೆ. ಹಳ್ಳಿಯಲ್ಲೇ ಕರ್ತವ್ಯ ನಿರ್ವಹಿಸುವಂತಹ ಶ್ಯಾನುಭೋಗರ ಭಾಷೆಯೂ ಸಹ ಸ್ವಚ್ಛವಾದ ಜನಸಾಮಾನ್ಯರ ಭಾಷೆಯಾಗಿದೆ. ಆದರೆ ನಗರದಲ್ಲಿರುವಂತಹ ಭಾಷೆಯು ಭಿನ್ನವಾಗಿದೆ. ಈ ನಾಟಕದಲ್ಲಿ ಬರುವಂತಹ ವಕೀಲ ಶಂಕರ್ ಮತ್ತು ಪ್ರಕಾಶ್ ಅವರ ಭಾಷೆಯ ಶೈಲಿಯೇ ಬೇರೆಯಾಗಿದೆ.

**ಪಾತ್ರಚಿತ್ರಣ**

ಈ ನಾಟಕವು ಸಂಕ್ಷಿಪ್ತವಾದುದು. ಆದರೆ ಇಲ್ಲಿನ ಪಾತ್ರ ಪ್ರಪಂಚವು ವಿಸ್ತಾರವಾಗಿದೆ. ರಾಜಮಹಾರಾಜರಂತಹ ಪ್ರತಿಷ್ಠಿತ ಪಾತ್ರಗಳನ್ನು ಬಳಸದೇ ಹಳ್ಳಿಯಲ್ಲಿರುವಂತಹ ಶ್ಯಾನುಭೋಗ, ಹಳ್ಳಿಯ ಸಾಹುಕಾರ, ರೈತ, ಹಿರಿಯ ಮುದುಕ, ಹಳ್ಳಿಯ ತರಲೆಗಾರ, ವಕೀಲರು, ಡಾಕ್ಟರುಗಳು, ಪೋಲೀಸ್ ಇನ್ಸ್‌ಪೆಕ್ಟರು, ಹಳ್ಳಿಯ ಗೌಡರು ಹಾಗೂ ಅವರ ಹೆಂಡತಿಯರುಗಳು ಅಲ್ಲದೆ ದುಃಶಾಸನ ಪಾತ್ರಧಾರಿ, ದ್ರೌಪದಿಯ ಪಾತ್ರಧಾರಿ, ಭಾಗವತರು, ಹಿಮ್ಮೇಳದವರು, ಮದ್ದಳೆಯವನು, ಮಾರಿ ಪೂಜಾರಿ, ಉರುಮೆ ಮತ್ತು ಕಹಳೆಯವರು, ಸ್ವಯಂ ಸೇವಕರುಗಳು ಪ್ರಮುಖ ಪಾತ್ರ ವಹಿಸಿದ್ದಾರೆ.

ಶಾಸ್ತ್ರಿಯವರ ಈ ನಾಟಕದಲ್ಲಿ ಪ್ರಮುಖವಾದ ಪಾತ್ರದಾರಿಗಳೆಂದರೆ ತಿಮ್ಮೇಗೌಡ ಹಾಗೂ ರಾಮೇಗೌಡ. ಇವರಿಬ್ಬರ ನಡುವೆ ನಡೆಯುವಂತಹ ಸಂಘರ್ಷ, ವೈಷಮ್ಯಗಳೇ ಈ ನಾಟಕದ ವಸ್ತುವಾಗಿದೆ.

ಹಳ್ಳಿ ಚಿತ್ರ ನಾಟಕದಲ್ಲಿ ಬರುವಂತಹ ಪ್ರಮುಖ ಪಾತ್ರಗಳನ್ನು ಈ ಕೆಳಗಿನಂತೆ ತಿಳಿದುಕೊಳ್ಳಬಹುದಾಗಿದೆ.

೧. **ನಂಜುಂಡಯ್ಯ:** ಕೋಣೆಗೆರೆಯ ಶಾನುಭೋಗನಾದ ಇವನು ಹಳ್ಳಿಯ ನಕಾಶೆ ಹಾಗೂ ಲೆಕ್ಕಪತ್ರಗಳನ್ನು ಇಡುವಂತಹ ಕರ್ತವ್ಯ ನಿರ್ವಹಿಸುತ್ತಿರುತ್ತಾನೆ. ಹಳ್ಳಿಯ ಪ್ರತಿಯೊಬ್ಬರ ಜಮೀನಿನ ಬಗ್ಗೆ ಇವನಿಗೆ ಅರಿವಿರುತ್ತದೆ. ಊರಿನ ಪ್ರಮುಖ ವ್ಯಕ್ತಿಗಳಾದ ತಿಮ್ಮೇಗೌಡ ಹಾಗೂ ರಾಮೇಗೌಡರ ಮಧ್ಯೆ ಇರುವಂತಹ ಹುಣಸೇಮರದ ಸಮಸ್ಯೆಯನ್ನು ಹೋಗಲಾಡಿಸಲು ಪ್ರಯತ್ನಿಸುವನು. ಪ್ರಯತ್ನವು ಪ್ರತಿಫಲವನ್ನು ನೀಡುವುದಿಲ್ಲ. ಹಳ್ಳಿ ಚಿತ್ರ ನಾಟಕದಲ್ಲಿ ನಂಜುಂಡಯ್ಯನವರಿಂದ ಪ್ರಮುಖವಾಗಿ ತಿಳಿದು ಬರುವುದೇನೆಂದರೆ ಶ್ಯಾನುಭೋಗನ ಕರ್ತವ್ಯವೇನು, ಅವನು ಯಾರಿಗೆ ಜವಾಬ್ದಾರನಾಗಿರುತ್ತಾನೆ, ಯಾವ ರೀತಿಯಾಗಿ ಅನಕ್ಷರಸ್ಥರಿಗೆ ಅಥವಾ ಕೆಳವರ್ಗದವರಿಗೆ ಮೋಸಮಾಡಬಹುದು ಎಂಬುದಾಗಿ ತಿಳಿಯಬಹುದು. ಆದಿಕರ್ನಾಟಕದವರ ಹೆಸರಿನ ಮೇಲೆ ತಿಮ್ಮೇಗೌಡನು ಜಮೀನನ್ನು ತೆಗೆದುಕೊಂಡು ಬಿತ್ತನೆ ಮಾಡುತ್ತಿರುತ್ತಾನೆ.[೫] ಹಾಗೂ ಯಾವುದೇ ಲೈಸೆನ್ಸ್ ಇಲ್ಲದೆಯೂ ತಂಬಾಕು ಬೆಳೆಯನ್ನು ಬೆಳೆಯುತ್ತಿರುತ್ತಾನೆ.

ಇದಕ್ಕೆ ಶ್ಯಾನುಭೋಗನು ತಕ್ಕ ರೀತಿಯಲ್ಲಿ ಲಂಚವನ್ನು ತೆಗೆದುಕೊಂಡು ತಿಮ್ಮೇಗೌಡನಿಗೆ ಸಹಾಯ ಮಾಡುತ್ತಾನೆ.[೬]

೨. **ತಿಮ್ಮೇಗೌಡ:** ಕೋಣಗೆರೆಯ ರೈತನಾದ ಇವನು ರಾಮೇಗೌಡನಿಗಿಂತಲೂ ಸ್ವಲ್ಪ ಹೆಚ್ಚು ಶ್ರೀಮಂತ. ಇವನು ಹೊಗೆ ಸೊಪ್ಪು ಬೆಳೆ ಬೆಳೆಯುತ್ತಿದ್ದನು ಹಾಗೂ ವ್ಯಾಪಾರಿಯೂ ಸಹ ಆಗಿದ್ದನು. ಇವನ ಹೊಲದಲ್ಲಿರುವಂತಹ ಹುಣಸೆಮರವನ್ನು ಪಡೆಯಲು ರಾಮೇಗೌಡನಲ್ಲಿ ಜಗಳ ಮಾಡುತ್ತಾನೆ, ಹಾಗೂ ತುಂಬಾ ಹಣವನ್ನು ಸಹ ವ್ಯಯ ಮಾಡುತ್ತಾನೆ ಆದರೆ ಯಾವುದೇ ಲಾಭ ಆಗುವುದಿಲ್ಲ, ಒಟ್ಟಾರೆಯಾಗಿ ತಿಮ್ಮೇಗೌಡನು ಹಳ್ಳಿಚಿತ್ರ ನಾಟಕದಲ್ಲಿ ಪ್ರಮುಖ ವ್ಯಕ್ತಿಯಾಗಿದ್ದು, ತನ್ನ ಮುಂಗೋಪ, ಸಿಟ್ಟು, ಅಹಂಕಾರ, ಹಣದ ಮದದಿಂದಾಗಿ ರಾಮೇಗೌಡನ ಮೇಲೆ ಅತಿಯಾದ ವೈರತ್ವವನ್ನು ಬೆಳೆಸಿ ಹಳ್ಳಿ ಜನರ ಮದ್ಯೆ ಸಂಘರ್ಷ ಮತ್ತು ವೈಷಮ್ಯವನ್ನು ಬೆಳೆಸುತ್ತಾನೆ.

೩. **ರಾಮೇಗೌಡ:** ಕೋಣಗೆರೆಯ ರೈತನಾಗಿದ್ದು, ತಿಮ್ಮೇಗೌಡನಿಗಿಂತ ಸ್ವಲ್ಪ ಬಡವನಾಗಿರುತ್ತಾನೆ. ಇವನು ಬಹಳ ವರ್ಷಗಳಿಂದಲೂ ಹುಣಸೆ ಮರವನ್ನು ಅನುಬೋಗಿಸುತ್ತಿರುತ್ತಾನೆ ಆದ್ದರಿಂದ ಅದು ನನ್ನ ಸ್ವತ್ತು ಎಂದು ತಿಳಿದುಕೊಂಡಿರುತ್ತಾನೆ. ಈ ಹುಣಸೆ ಮರವನ್ನು ಪಡೆಯಲು ಸಾವಿರಾರು ರೂಪಾಯಿಗಳನ್ನು ವ್ಯಯಮಾಡಿ ತನ್ನ ಹೊಲವನ್ನು ಸಹ ಹಣಕ್ಕಾಗಿ ಕ್ರಯಕ್ಕೆ ಒತ್ತುವರಿಯಾಗಿ ಕೊಟ್ಟಿರುತ್ತಾನೆ. ಇವನು ವೀರಪ್ಪ ಎಂಬ ತರಲೆಗಾರನ ಮಾತನ್ನು ಕೇಳಿ ಕೋರ್ಟು, ಲಾಯರು, ಡಾಕ್ಟರು, ಪೋಲೀಸು ಎಂದು ತಿರುಗಾಡಿ ಹಣವನ್ನು, ಮನಸ್ಸನ್ನು, ಜನರ ವಿಶ್ವಾಸವನ್ನು ಕೆಡಿಸಿಕೊಳ್ಳುತ್ತಾನೆ. ವೈಷಮ್ಯದಿಂದ ಇವನಿಗೆ ಯಾವುದೇ ರೀತಿಯ ಲಾಭವಾಗುವುದಿಲ್ಲ.

೪. **ಮಂಡ್ಗಳ್ಳಿ ವೀರಪ್ಪ:** ಹಳ್ಳಿಯ ಪೂಟ್‌ಲಾಯರ್‌ನಂತಿರುವ (ತೆರಲೆಗಾರ) ಇವನು ಹಳ್ಳಿಯನ್ನಲ್ಲದೆ ನಗರದ ಜೀವನದ ಬಗ್ಗೆಯೂ ತಿಳಿದಿರುತ್ತಾನೆ. ನಗರದಲ್ಲಿ ನಡೆಯುವಂತಹ ಅವ್ಯವಹಾರ, ಮೋಸ, ಭ್ರಷ್ಟಾಚಾರದ ಬಗ್ಗೆ ಚೆನ್ನಾಗಿ ಇವನು ತಿಳಿದಿರುತ್ತಾನೆ. ಹಳ್ಳಿಯ ಜನರನ್ನು ನಗರದಲ್ಲಿ ಯಾವ ರೀತಿ ಮೋಸಮಾಡಬಹುದು ಎಂಬುದು ವೀರಪ್ಪನ ಪಾತ್ರದಿಂದ ತಿಳಿದುಬರುತ್ತದೆ. ರಾಮೇಗೌಡನನ್ನು ಲಾಯರ್ ಬಳಿ ಕರೆದುಕೊಂಡು ಹೋಗಿ ಹೆಚ್ಚಿನ ಹಣವನ್ನು ವ್ಯಯಮಾಡಿಸುತ್ತಾನೆ. ಇಂದರಿಂದ ಸ್ವತಃ ವೀರಪ್ಪನೂ ಲಾಭ ಪಡೆಯುತ್ತಾನೆ. ಈ ನಾಟಕದಲ್ಲಿ ವೀರಪ್ಪ ಒಬ್ಬ ಬುದ್ಧಿವಂತ ಮೋಸಗಾರ, ಎಂಬುದಾಗಿ ಹೇಳಬಹುದು. ಹಳ್ಳಿಯ ಜನರನ್ನು ಹಾಗೂ ನಗರದಲ್ಲಿರುವ ಅಧಿಕಾರಿಗಳನ್ನು ಸಹ ಮಾತಿನಲ್ಲಿ ಮೋಡಿ ಮಾಡುವಂತಹ ಚಾತುರ್ಯವನ್ನು ಹೊಂದಿರುವಂತವನು. ಕೊನೆಯಲ್ಲಿ ಇವನ ಮೋಸಕ್ಕೆ ಪ್ರತಿಯಾಗಿ ತಲೆಗೆ ಸರಿಯಾಗಿ ಏಟು ಬಿದ್ದು ಮಾನಸಿಕವಾಗಿ ಪರಿವರ್ತನೆಹೊಂದುತ್ತಾನೆ.

೫. **ಲಿಂಗಜ್ಜ:** ಇವರು ಹಳ್ಳಿಯ ಹಿರಿಯ ಜೀವ. ಹಳ್ಳಿಗಳಲ್ಲಿ ನ್ಯಾಯ ತೀರ್ಮಾನ ಮಾಡಲು ಪಂಚಾಯ್ತಿ ಕಟ್ಟೆ ಇರುತ್ತಿತ್ತು. ಈ ಕಟ್ಟೆಯ ಅಧ್ಯಕ್ಷತೆಯನ್ನು ಹಳ್ಳಿಯ ಹಿರಿಯರು, ಅನುಭವಿಗಳು ವಹಿಸಿಕೊಳ್ಳುತ್ತಾರೆ. ಲಿಂಗಜ್ಜನೂ ಕೂಡ ಹಳ್ಳಿಯ ಯಜಮಾನ, ತಿಮ್ಮೇಗೌಡ ಹಾಗೂ ರಾಮೇಗೌಡರ

ನಡುವೆ ಇರುವ ವೈಷಮ್ಯವನ್ನು ಹೋಗಲಾಡಿಸಲು ಹಳ್ಳಿಯಲ್ಲಿ ಲಿಂಗಜ್ಜ ಪ್ರಯತ್ನಿಸಿದನು. ಆದರೆ ಲಿಂಗಜ್ಜ ತಿಮ್ಮೇಗೌಡನ ಪರ ನ್ಯಾಯ ನೀಡಿದನು. ಇದರಿಂದ ಬೇಸತ್ತು ರಾಮೇಗೌಡ ಕೋರ್ಟುಗೆ ಅರ್ಜಿ ಸಲ್ಲಿಸಿ ವಿಫಲನಾದನು. ಈ ನಾಟಕದಲ್ಲಿ ಲಿಂಗಜ್ಜನ ಮಾತಿಗೆ ಊರಿನ ಎಲ್ಲಾ ಜನರೂ ಮನ್ನಣೆ ನೀಡುತ್ತಾರೆ. ಆದರೆ ರಾಮೇಗೌಡ, ವೀರಪ್ಪ ಮಾತ್ರ ಲೆಕ್ಕಿಸದೆ ಹಾಳಾಗಿ ಹೋಗುತ್ತಾರೆ.

೬. **ಅಮರನಾಥ್:** ಗ್ರಾಮಸೇವಾ ಸಂಘದ ಕಾರ್ಯದರ್ಶಿಯಾದ ಇವರು ತಮ್ಮ ಸಂಘದ ಸದಸ್ಯರನ್ನು ಕರೆದುಕೊಂಡು ಊರಿಂದ ಊರಿಗೆ ಹಳ್ಳಿಗಳಲ್ಲಿನ ಅಸಮಾನತೆ, ವೈಷಮ್ಯ ಸಂಘರ್ಷಗಳನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿರುತ್ತಾರೆ. ಕೋಣಗೆರೆಗೆ ಬಂದ ದಿನದಲ್ಲಿ ಊರಿನ ಜನರು ಆಕಸ್ಮಿಕವಾಗ ಇವರ ತಲೆ ಮೇಲೆ ಹೊಡೆದು ರಕ್ತ ಸೋರುವಂತೆ ಮಾಡುತ್ತಾರೆ. ಆಗ ಇವರು ಹೇಳುವಂತಹ ಗಾಂಧೀಜಿ ತತ್ವವಾದ ಗ್ರಾಮರಾಜ್ಯದ ಕನಸುಗಳ ಮಾತನ್ನು ಕೇಳಿ ಜನರ ಮನಸ್ಸು ಪರಿವರ್ತನೆ ಹೊಂದುತ್ತದೆ. ತಮ್ಮ ತಮ್ಮ ತಪ್ಪಿನ ಅರಿವಾಗಿ ಎಲ್ಲರೂ ಜೊತೆಗೂಡಿ ಹಳ್ಳಿಗೆ ಬೇಕಾಗುವಂತಹ ಕೆಲಸ ಕಾರ್ಯಗಳನ್ನು ಕುಳಿತು ಮಾತನಾಡಿ ಬಗೆಹರಿಸಿಕೊಳ್ಳುತ್ತಾರೆ. ಹುಣಸೆಮರವನ್ನು ಮತ್ತು ಜಾಗವನ್ನು ಕೋಣಗೆರೆಯ ಶಾಲೆಗೆ ಬಿಟ್ಟುಕೊಡುತ್ತಾರೆ. ಈ ನಾಟಕದಲ್ಲಿ ವೀರಪ್ಪ ಊರನ್ನೇ ಬಿಟ್ಟು, ಗ್ರಾಮಸೇವಾ ಸಂಘದ ಸದಸ್ಯನಾಗಿ ಕಾರ್ಯನಿರ್ವಹಿಸಲು ತೊಡಗುತ್ತಾನೆ.

ಹಳ್ಳಿಚಿತ್ರ ನಾಟಕದಲ್ಲಿ ಕೇವಲ ಪುರುಷ ಪಾತ್ರಗಳಲ್ಲದೆ. ಸ್ತ್ರೀ ಪಾತ್ರಗಳನ್ನು ಕಾಣಬಹುದು. ಎಂಟನೇ ದೃಶ್ಯದಲ್ಲಿ ತಿಮ್ಮೇಗೌಡನ ಹೆಂಡತಿ ಈರವ್ವ ಮತ್ತು ರಾಮೇಗೌಡನ ಹೆಂಡತಿ ನಾಗವ್ವರ ಸಂಭಾಷಣೆ ಅಥವಾ ಮಾತಿನ ಚಕಾಮಕಿಯನ್ನು ಕಾಣಬಹುದು.

ಸ್ತ್ರೀಯರು ತಮ್ಮ ಯಜಮಾನರ ಪರವಾಗಿ ಯಾವ ರೀತಿಯ ಜಗಳವನ್ನು ಆಡುತ್ತಾರೆ ಎಂಬುದನ್ನು ಈ ನಾಟಕದ ಮೂಲಕ ತಿಳಿಯಬಹುದು. ತಮ್ಮ ಮಾತುಗಳ ಮುಖಾಂತರ ಉತ್ಪ್ರೇಕ್ಷೆಯ ನುಡಿಗಳನ್ನು ಬಹಳ ಚೆನ್ನಾಗಿ ಕಟ್ಟುವುದನ್ನು ಕಾಣಬಹುದು. ಹಳ್ಳಿಯ ಹೆಣ್ಣುಮಕ್ಕಳು ಅತಿ ಸಣ್ಣ ವಿಷಯಕ್ಕೆ ಯಾವ ರೀತಿಯ ಜಗಳವನ್ನು ಮಾಡುತ್ತಾರೆ ಎಂಬುದನ್ನು ಈರವ್ವ ಮತ್ತು ನಾಗವ್ವರ ಮಾತುಗಳಿಂದ ಕಂಡುಕೊಳ್ಳಬಹುದು.

೧. **ಈರವ್ವ:** ತಿಮ್ಮೇಗೌಡನ ಹೆಂಡತಿ ಈರವ್ವ, ಇವಳು ತನ್ನ ಮನೆಯ ಮುಂದೆ ನಡೆದುಕೊಂಡು ಹೋದ ವಿಷಯವನ್ನೇ ಮುಖ್ಯವಾಗಿಟ್ಟುಕೊಂಡು ಜಗಳ ಮಾಡುತ್ತಾಳೆ. ಅಂದರೆ ಜಗಳ ಆಡಲು ಇವಳು ಯಾವುದಾದರೊಂದು ವಿಷಯವನ್ನು ಕಾದು ಕುಳಿತಿರುತ್ತಾಳೆ. ಎದುರಾಳಿಯು ಮಾಡುವಂತಹ ತಪ್ಪುಗಳನ್ನು, ಮೋಸವನ್ನು, ಅವ್ಯವಹಾರವನ್ನು ಉತ್ಪ್ರೇಕ್ಷವಾಗಿ ಮಾತನಾಡುತ್ತ ಹೀಯಾಳಿಸುವುದು ಹಳ್ಳಿಯ ಸ್ತ್ರೀಯರ ಜಗಳದ ಪ್ರಮುಖ ಲಕ್ಷಣವಾಗಿದೆ.

ಉದಾ:- ಒಂದೀಟನ್ನಾ ನಾಶ್ಕಿಲ್ಲ, ಗ್ಯಾನ್ಗೇಡಿ! ಗತಿಯಿಲ್ದೆ ನಮ್ಮನೇ ಮುಂದೆ ನೀರೊತ್ಕೊಂಡೋಡ್ತಾಳೆ! ನಿಬ್ಬಿರವಂತೆ[೨]

ಈ ಮೇಲಿನ ವಾಕ್ಯದಲ್ಲಿ ಪ್ರಮುಖವಾಗಿ ತಿಳಿದು ಬರುವುದೇನೆಂದರೆ ತಮ್ಮ ಎದುರಾಳಿಯವರ ಮನೆಯ ಮುಂದೆ ಓಡಾಡುವುದೇ ತಪ್ಪು ಎಂಬಂತೆ ಬಿಂಬಿತವಾಗಿದೆ. ರಾಮೇಗೌಡ ಮತ್ತು ತಿಮ್ಮೇಗೌಡರು ಒಬ್ಬರಿಗೊಬ್ಬರು ವೈಷಮ್ಯದಿಂದ ಕೋರ್ಟ್‌ಗೆ ಓಡಾಡುವಂತಹ ಸಂದರ್ಭದಲ್ಲಿ ಅವರ ಮನೆಯವರು (ಹೆಂಡತಿ) ಯಾವ ರೀತಿ ಪ್ರತಿಕ್ರಿಯೆಯನ್ನು ನೀಡುತ್ತಾರೆ ಎಂಬುದನ್ನು ಈ ನಾಟಕದಲ್ಲಿ ತಿಳಿಯಬಹುದು.

ಈರವ್ವ ರಾಮೇಗೌಡನನ್ನು ಬಹದ್ದೂರ್‌ಗಂಡು, ಸಿರಿರಾಮಚಂದ್ರ, ರಾಮಚಂದ್ರ ಎಂದು ಹಲವಾರು ರೀತಿಯ ಉತ್ಪ್ರೇಕ್ಷೆ ಮಾತುಗಳನ್ನಾಡುತ್ತಾಳೆ.

ಉದಾ:- ೧. ಅಂಗೆ ಉಣಸೆ ಮರ ಬೆಳೆಸಿದ ಬಾದ್ದೂರ್ ಗಂಡ್ಸಾಗಿದ್ರೆ ನಿನ್ಗಂಡ, ಶನ್ನಿಗರಾಯ, ಈಗ ಉಳಿಸಿಕೊಂಬ್ಲೆ ಮತ್ತೆ, ಉಣಸೇ ಮರಾನ್[೮]

೨. ನನ್ಗಂಡನೇನೂ ತಿರುಪ್ತಿ ತಿಮ್ಮಪ್ಪ ನಿಗ್ಗಂಡ್ನೋ ರಾಮಶಂದರ್ನೆನೋ ಸಿರಿರಾಮಚಂದ್ರ! ನೀನು ಸೀತಾದೇವಿ, ಅಲ್ವೇ? ಶೂರ್ಪನಕ್ಕಿ ಕಿವೀ ಮೂಗು ಕೊಯ್ಸಿದ ಪತಿವರ್ತೆ![೯]

ಹಳ್ಳಿಯಲ್ಲಿನ ಸ್ತ್ರೀಯರ ಜಗಳವು ಕೊನೆಯಲ್ಲಿ ಅತಿಕೋಪದಿಂದ ಒಬ್ಬರಿಗೊಬ್ಬರು ಕೂದಲು ಹಿಡಿಯುವುದರಿಂದ, ಎಳೆದಾಡುವುದರೊಂದಿಗೆ ಕೊನೆಗೊಳ್ಳುತ್ತದೆ. ಈ ನಾಟಕದಲ್ಲಿ ಈರವ್ವ ನಾಗವ್ವನನ್ನು ಕೂದಲು ಹಿಡಿದು ಊರಿನ ಮುಂದಕ್ಕೆ ಹೋಗಲು ಕರೆಯುವಳು.

ಕೇವಲ ತಮ್ಮ ಗಂಡಂದಿರನ್ನಲ್ಲದೆ ಅವಳು ಇವಳನ್ನು, ಇವಳು ಅವಳನ್ನ ಹೀಯಾಳಿಸಿ ಬೈಯ್ಯುವಂತಹ ಮಾತುಗಳನ್ನು ಇಲ್ಲಿ ಕಾಣಬಹುದು.

**೨. ನಾಗವ್ವ:** ರಾಮೇಗೌಡನ ಹೆಂಡತಿ, ಇವಳು ತನ್ನ ಗಂಡನ ಪರವಹಿಸಿಕೊಂಡು ತನ್ನ ಗಂಡ ಮಾಡಿದ್ದೇ ಶ್ರೇಷ್ಠ ಎಂಬಂತೆ ಮಾತನಾಡುವುದನ್ನು ಇಲ್ಲಿ ಕಾಣಬಹುದು. ಹಳ್ಳಿ ಸ್ತ್ರೀಯರ ಜಗಳದಲ್ಲಿ ಗಾದೆಯ ಮಾತುಗಳು ಬಹಳ ಚೆನ್ನಾಗಿ ಬಿತ್ತರವಾಗುತ್ತವೆ. ನಾಗವ್ವನ ಬಾಯಿಂದ ಅಂತಹದೇ ಗಾದೆ ಮಾತುಗಳು ಜಗಳದ ಮೂಲಕ ಹೊರ ಬರುತ್ತವೆ.

ಉದಾ:- ಮೂರು ಬಿಟ್ಟೋರು ಊರಿಗೆ ದೊಡ್ಡೋರು.

ನಾಗವ್ವ, ತಿಮ್ಮೇಗೌಡನನ್ನು ಕುರಿತು ಆಡುವಂತಹ ಉತ್ಪ್ರೇಕ್ಷೆಯ ಮಾತುಗಳು ತುಂಬಾ ಚೆನ್ನಾಗಿ ಬಿತ್ತರವಾಗಿವೆ.[೧೦]

ಉದಾ:- ಊ ಕಣೆ, ನಾವು ಸಾಲ್ಗೋರೇ ಕಣೆ ಅದ್ಕೆ ಮತ್ತೆ ನಿನ್ಗಂಡದಾನಲ್ಲ ತಿಮ್ಮಪ್ಪ, ತಿರುಪ್ತೀ ತಿಮ್ಮಪ್ಪ, ಮೂಡ್ಲಗಿರಿ ತಿಮ್ಮಪ್ಪ, ಅಯಪ್ಪೆಸಿರಿನ ಮ್ಯಾಲೆ ದಿನಾ ಮೀಸಲು ಕಟ್ಟೋದು ನಾವು.[೧೧]

ಹೀಗೆ ಹಳ್ಳಿಯ ಸ್ತ್ರೀಯರು ತಮ್ಮ ಗಂಡನ ಅಥವಾ ಮನೆಯವರ ಪರವನ್ನು ವಹಿಸಿ ಬೀದಿಗೆ ಇಳಿದು ಜಗಳವನ್ನು ಮಾಡುತ್ತಾರೆ. ಎದುರಾಳಿ ಜನರ ಲೋಪ ದೋಷಗಳನ್ನು ಹೀಯಾಳಿಸುವುದೇ ಅವರ ಜಗಳದ ಪ್ರಮುಖ ಉದ್ದೇಶವಾಗಿರುತ್ತದೆ.

ಹಳ್ಳಿ ಚಿತ್ರ ನಾಟಕದಲ್ಲಿ ಹಳ್ಳಿಗಳಲ್ಲಿ ನಡೆಯುವಂತಹ ಸಾಮಾನ್ಯವಾದ ವೈಷಮ್ಯ ಸಂಘರ್ಷಗಳು ಯಾವ ರೀತಿ ಉಂಟಾಗುತ್ತವೆ ಅವುಗಳಿಂದಾಗುವ ಪರಿಣಾಮಗಳು ಯಾವ ರೀತಿ ಸಂಭವಿಸುತ್ತವೆ

ಅದರಿಂದ ಯಾರಿಗೆ ಲಾಭ, ನಷ್ಟವಾಗುತ್ತದೆ ಎಂಬುದು ಈ ನಾಟಕದ ಮೂಲಕ ಕೂಲಂಕುಷವಾಗಿ ತಿಳಿದುಬರುತ್ತದೆ.

ಹಳ್ಳಿಯಲ್ಲಿ ಹುಟ್ಟಿ ಬೆಳೆದು ಹಳ್ಳಿಯ ಜೀವನವನ್ನು ರೂಢಿಸಿಕೊಂಡಿರುವ ಶಾಸ್ತ್ರಿಗಳು ಹಳ್ಳಿಗಳ ದೇಶವಾದ ಭಾರತಕ್ಕೆ ಸಹಜವಾದ ನಾಟಕಗಳನ್ನು ರಚಿಸಿ ನಾಡಿನ ಪ್ರಗತಿಗೆ ದಿತ್ಯ ಪಥವನ್ನು ಸೃಷ್ಟಿಸಿದ್ದಾರೆ. “ಹಳ್ಳಿಗಳ ಉದ್ಧಾರವಾಗದ ಹೊರತು ನಾಡಿನ ಉದ್ಧಾರವಾಗದು”[೫೨] ಎಂಬ ಸತ್ಯದ ಕಿಡಿನುಡಿಗಳಿಂದ ನಾಡನ್ನು ಎಚ್ಚರಿಸಿದ್ದಾರೆ.

ಒಂದು ಹಳ್ಳಿಗೆ ಬೇಕಾದತಂಹ ಜನರ ಸೌಹಾರ್ದತೆ ಮತ್ತು ಸಂವಿಧಾನದ ಅವಶ್ಯಕತೆಯನ್ನು ಈ ನಾಟಕದಲ್ಲಿ ಶಾಸ್ತ್ರಿಗಳು ಚೆನ್ನಾಗಿ ಚಿತ್ರಿಸಿದ್ದಾರೆ. ಗಾಂಧೀಜಿ ಕಂಡ ಕನಸು ಗ್ರಾಮರಾಜ್ಯ ಅನ್ನೋದು ಹಳ್ಳಿಗಳಲ್ಲಿನ ಜನರು ನಡೆಸುವಂತಹ ಸೌಹಾರ್ದಯುತವಾದ ಆಡಳಿತವಾಗಿದೆ.[೫೩] ಹಳ್ಳಿಗಳ ಆಡಳಿತವನ್ನು ಇನ್ನೊಬ್ಬರಿಗಾಗಿ ಕಾಯದಂತೆ ತಮಗೆ ತಾವೇ ನೋಡಿಕೊಳ್ಳಬೇಕೆಂದು ಶಾಸ್ತ್ರಿಯವರು ಈ ನಾಟಕದ ಮೂಲಕ ತಿಳಿಯಪಡಿಸುತ್ತಾರೆ.

ಹಳ್ಳಿಯ ಸಮಸ್ಯೆಗಳನ್ನು ಹಳ್ಳಿಯಲ್ಲೇ ಬಗೆಹರಿಸಿಕೊಳ್ಳಬೇಕು, ಇಲ್ಲವಾದಲ್ಲಿ ಹಲವಾರು ರೀತಿಯ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಈ ನಾಟಕದಲ್ಲಿ ಬರುವಂತಹ ರಾಮೇಗೌಡನು ಕೇವಲ ಒಂದು ಹುಣಸೆಮರಕ್ಕೋಸ್ಕರ ಸಾವಿರಾರು ರೂಪಾಯಿ ಹಣವನ್ನು ವ್ಯಯ ಮಾಡುತ್ತಾನೆ. ತನ್ನ ಹೊಲವನ್ನೂ ಸಹ ಹಣಕ್ಕಾಗಿ ಸಾಹುಕಾರನಿಗೆ ಒತ್ತೆಯಾಗಿ ಇಟ್ಟು ಹಣಪಡೆದು ಮರವನ್ನು ಪಡೆಯಲು ಹಾಗೂ ತನ್ನ ದ್ವೇಷವನ್ನು ಸಾಧಿಸಲು ಪ್ರಯತ್ನ ಮಾಡುತ್ತಾನೆ. ಎಷ್ಟೇ ಪ್ರಯತ್ನಪಟ್ಟರೂ ಸಹ ಮರವನ್ನು ಪಡೆಯಲು ಆಗುವುದಿಲ್ಲ ಜೊತೆಗೆ ಸಾವಿರಾರು ರೂಪಾಯಿ ಹಣವನ್ನು ಕಳೆದುಕೊಳ್ಳುತ್ತಾನೆ.

ಹುಣಸೆ ಮರವನ್ನು ಪಡೆಯಲು ರಾಮೇಗೌಡ ಹಾಗೂ ತಿಮ್ಮೇಗೌಡ ಇಬ್ಬರೂ ವಿಫಲರಾಗುತ್ತಾರೆ ಇದರಿಂದಾಗಿ ಊರಿನಲ್ಲಿ ಒಬ್ಬರಿಗೊಬ್ಬರು ಬಡಿದಾಡಿಕೊಳ್ಳುತ್ತಾರೆ. ಈ ಹೊಡೆದಾಟದಿಂದ ಕುತಂತ್ರಿಯಾದ ವೀರಪ್ಪನ ತಲೆಗೆ ಒಡೆತ ಬೀಳುತ್ತದೆ. ಅದೇ ಸಮಯದಲ್ಲಿ ಬಂದಂತಹ ಗ್ರಾಮ ಸೇವಕರ ಕಾರ್ಯದರ್ಶಿಯಾದ ಅಮರನಾಥರವರ ತಲೆಗೂ ಏಟು ಬೀಳುತ್ತದೆ. ಆ ಮೇಲೆ ಅಮರನಾಥನು ಹೇಳಿದಂತಹ ಗಾಂಧಿ ತತ್ವದ ಗ್ರಾಮರಾಜ್ಯದ ಹಿತನುಡಿಗಳನ್ನು ಜನರು ಅರಿತು ಪರಿವರ್ತನೆಯಾಗುತ್ತಾರೆ. ಹಳ್ಳಿಯ ಜನರಿಗೆ ತಮ್ಮ ತಪ್ಪಿನ ಅರಿವಾಗುತ್ತದೆ. ತಮ್ಮ ಈ ಸ್ಥಿತಿಗೆ ಕಾರಣ ಯಾರು ಎಂಬುದನ್ನು ಅರಿತು ಎಲ್ಲರೂ ಸೌಹಾರ್ದಯುತವಾಗಿ ಕುಳಿತು ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಿಕೊಳ್ಳುತ್ತಾರೆ.

ಹೀಗೆ ಈ ನಾಟಕದಲ್ಲಿ ಹಳ್ಳಿ ಜನರನ್ನು ನಗರದ ಜನರು ಯಾವ ರೀತಿ ಮೋಸ ಮಾಡುತ್ತಾರೆ ಎಂಬುದನ್ನು ತುಂಬಾ ಚೆನ್ನಾಗಿ ಚಿತ್ರಿಸಲಾಗಿದೆ.

ಪ್ರಸ್ತುತ ನಾಟಕದಲ್ಲಿ ಲಾಯರ್ ಶಂಕರ್ ಎಂಬುವರು ರಾಮೇಗೌಡನನ್ನು ಯಾವ ರೀತಿ ನಂಬಿಸಿ ಅವನಲ್ಲಿದ್ದ ಹಣವನ್ನು ವ್ಯಯ ಮಾಡಿ ಕೊನೆಗೆ ಕೇಸು ಸೋತು ಹೋಗುವುದನ್ನು ಕಾಣಬಹುದು.

ಅದೇ ರೀತಿ ಡಾಕ್ಟರ್ ಚಂದ್ರಶೇಖರ ಹಾಗೂ ಪೋಲೀಸ್ ಇನ್ಸ್‌ಪೆಕ್ಟರ್ ಭೀಮಸೇನ್‌ರವರು ರಾಮೇಗೌಡನನ್ನು ವಂಚಿಸಿದ ರೀತಿ, ಅದಕ್ಕಾಗಿ ಪಡುವಂತಹ ಕಷ್ಟ, ನೋವುಗಳನ್ನು ಈ ನಾಟಕದಲ್ಲಿ ನಾವು ತಿಳಿದುಕೊಳ್ಳಬಹುದು.

ಈ ನಾಟಕದಲ್ಲಿ ಹಿಂದುಳಿದ ಜನರ ಹೆಸರಿನ ಮೇಲೆ ಸರ್ಕಾರದಿಂದ ಪಡೆದಂತಹ ಉಚಿತ ಭೂಮಿಯನ್ನು ಮೇಲ್ವರ್ಗದವರು ಯಾವ ರೀತಿ ಉಪಯೋಗಿಸಿಕೊಳ್ಳುತ್ತಾರೆ ಎಂಬುದು ತಿಳಿದುಬರುತ್ತದೆ. ದಲಿತ ಜನಾಂಗಕ್ಕೆ ನೀಡಿದಂತಹ ಜಮೀನನ್ನು ತಿಮ್ಮೇಗೌಡನು ಬಳಸಿಕೊಂಡು ಅದನ್ನು ವಿಚಾರಣೆ ಮಾಡಿದಂತಹ ಶ್ಯಾನುಬೋಗನಿಗೆ ಲಂಚವಾಗಿ ಹಣ ಮತ್ತು ಇತರೆ ವಸ್ತುಗಳನ್ನು ನೀಡುವುದು ಇತ್ಯಾದಿಯಾಗಿ ಶೋಷಣೆ ಹಾಗೂ ಭ್ರಷ್ಟಾಚಾರದ ಸ್ಥೂಲ ವಿವರಗಳು ಇಲ್ಲಿ ಚಿತ್ರಿತವಾಗಿವೆ.

ಸರ್ಕಾರ ನೀಡುವ ಲೈಸೆನ್ಸ್‌ನಿಂದ ಯಾವುದೇ ರೀತಿಯ ಕೆಟ್ಟ ಕೆಲಸವನ್ನು ಬೇಕಾದರೂ ಮಾಡಬಹುದು. ಅಂದರೆ ಕೆಟ್ಟ ಕೆಲಸಗಳಿಗೆ ಸರ್ಕಾರವೇ ಒಪ್ಪಿಗೆ ನೀಡುವಂತಹ ಪರಿಸ್ಥಿತಿ ಇಂದು ಒದಗಿದೆ ಎಂಬಂತಹ ವಿಮರ್ಶಾತ್ಮಕ ವಿಚಾರಣೆಗಳೂ ಇಲ್ಲಿ ಗಂಭೀರವಾಗಿ ಮಂಡಿತವಾಗಿವೆ.

ಒಟ್ಟಾರೆ ಈ ನಾಟಕವು ಗ್ರಾಮೀಣ ಪರಿಸರದ ಸಮಕಾಲೀನ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತಲೇ ಪರಿಹಾರೋಪಾಯಗಳನ್ನೂ ಸೂಚಿಸುವ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ.

## ಅಡಿಟಿಪ್ಪಣಿ

೦೧. ಹಳ್ಳಿಚಿತ್ರ ನಾಟಕ, ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಪುಟ-೧೪
೦೨. ಅದೇ, ಪುಟ- ೧೪, ೨೦, ೨೨, ೨೪
೦೩. ಅದೇ, ಪುಟ- ೨೯
೦೪. ಅದೇ, ಪುಟ- ೧೭, ೩೦
೦೫. ಅದೇ, ಪುಟ- ೧೬
೦೬. ಅದೇ, ಪುಟ- ೧೫
೦೭. ಅದೇ, ಪುಟ- ೬೫
೦೮. ಅದೇ, ಪುಟ- ೬೫
೦೯. ಅದೇ, ಪುಟ- ೬೬
೧೦. ಅದೇ, ಪುಟ- ೬೫
೧೧. ಅದೇ, ಪುಟ- ೬೫
೧೨. ಅದೇ, ಪುಟ- ೧೩೧
೧೩. ಅದೇ, ಪುಟ- ೧೨೬

## ೨.೭. ಹಳ್ಳಿ ಮೇಷ್ಟ್ರು (ನಾಟಕ)

ಶ್ರೀಯುತ ಬೆಳಗೆರೆ ಕೃಷ್ಣಶಾಸ್ತ್ರಿಯವರು ರಚಿಸಿದಂತಹ ನಾಟಕಗಳಲ್ಲಿ ಹಳ್ಳಿಮೇಷ್ಟ್ರು ನಾಟಕವೂ ಒಂದು. ಈ ನಾಟಕವು ರಾಜ್ಯದ ಹಲವಾರು ಕಡೆಗಳಲ್ಲಿ ಪ್ರದರ್ಶನಗೊಂಡು ಹಲವಾರು ಪ್ರಶಸ್ತಿಗಳನ್ನು ಗಳಿಸಿದೆ. ಶಾಸ್ತ್ರಿಯವರು ಒಬ್ಬ ಶಿಕ್ಷಕರಾಗಿದ್ದು, ಇವರು ಈ ಕೃತಿಯಲ್ಲಿ ಶಿಕ್ಷಕನಾಗಿರಬೇಕಾದ ಹಲವಾರು ಗುಣಲಕ್ಷಣಗಳನ್ನು ವಿವರವಾಗಿ ಸಂದರ್ಭೋಚಿತವಾಗಿ ತಿಳಿಯಪಡಿಸಿದ್ದಾರೆ. ಸ್ತ್ರೀ ಪಾತ್ರಗಳೇ ಇಲ್ಲದ ನಾಟಕ ಹಳ್ಳಿಮೇಷ್ಟ್ರು ನಮ್ಮ ಹಳ್ಳಿ ಜನರ ಮನೋಭಾವ, ಅಲ್ಲಿನ ಮುಖಂಡರಲ್ಲಿರುವ ಪರಸ್ಪರ ದ್ವೇಷಾಸೂಯೆ, ಅವರ ಮಧ್ಯೆ ನಿಂತು ನಿಸ್ವಾರ್ಥ ಸೇವೆ ಸಲ್ಲಿಸಬಯಸುವ ಉಪಾಧ್ಯಾಯನ ಸ್ಥಿತಿಗತಿ ಇವುಗಳನ್ನು ಹೃದಯಂಗಮವಾಗಿ ವಾಸ್ತವವಾಗಿ ಚಿತ್ರಿಸುವ ಈ ನಾಟಕ ಕಥಾತಂತ್ರ ಹಾಗೂ ಪರಿಣಾಮಕಾರಿ ಮುಕ್ತಾಯದ ದೃಷ್ಟಿಯಿಂದ ಶ್ರೇಷ್ಠ ದರ್ಜೆಗೆ ಸೇರುತ್ತದೆ.

ಪ್ರತಿಯೊಂದು ಹಳ್ಳಿಯಲ್ಲಿ ಇರುವಂತೆ ಊರಿನ ಪ್ರಮುಖರ ಮಧ್ಯೆ ಸಂಘರ್ಷಗಳು, ವೈರತ್ವಗಳು ಈ ನಾಟಕದಲ್ಲೂ ಕಂಡುಬರುತ್ತವೆ. ಹಳ್ಳಿಮೇಷ್ಟ್ರು ನಾಟಕದಲ್ಲಿ ಸಾಹುಕಾರ ಸಿದ್ರಾಮನ ಮಗ ಊರಿನ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದು, ಇವನಿಗೆ ನಾನು ನನ್ನದು, ಪ್ರತಿಯೊಂದು ನನ್ನಿಂದಲೇ ನಡೆಯಬೇಕು ಎಂಬಂತಹ ಭಾವನೆಯನ್ನು ಅಥವಾ ಅಹಂನ್ನು ಹೊಂದಿರುತ್ತಾನೆ. ಇದೇ ರೀತಿ ಇತರೆ ಹಲವಾರು ಪ್ರಮುಖ ವ್ಯಕ್ತಿಗಳೂ ಸಹ ಅಹಂನ್ನು ಹೊಂದಿರುತ್ತಾರೆ. ಈ ಹಳ್ಳಿಯ ಮುಖಂಡರಲ್ಲಿ ಇದೇ ರೀತಿ ಪರಸ್ಪರ ದ್ವೇಷಾಸೂಯೆಗಳಿಂದ ಯಾವುದೇ ಉತ್ತಮ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿರುವುದಿಲ್ಲ. ಇವರು ಹಳ್ಳಿಯಲ್ಲಿ ನಡೆಯುವಂತಹ ಯಾವುದೇ ಕಾರ್ಯಕ್ಕೂ ಅಡ್ಡಿಯನ್ನುಂಟುಮಾಡುತ್ತಿದ್ದರು. ಇವರ ನಡುವೆ ಕೇವಲ ವೈರತ್ವ ಸಾಧಿಸುವುದೇ ಮುಖ್ಯ ಹೊರತು ಹಳ್ಳಿಯ ಅಭಿವೃದ್ಧಿ ಮುಖ್ಯವಾಗಿರುವುದಿಲ್ಲ. ಎನ್ನುವಂತಹ ಅಂಶಗಳನ್ನು ಶಾಸ್ತ್ರಿಗಳು ತಮ್ಮ ಈ ನಾಟಕದ ಮೂಲಕ ವಿವರಿಸುತ್ತಿದ್ದಾರೆ.

ಒಬ್ಬ ಶಾಲೆಯ ಶಿಕ್ಷಕನಿಗೆ ಇರಬೇಕಾದಂತಹ ಸಾಮಾನ್ಯ ಗುಣಗಳೇನು ಹಾಗೂ ಆ ಶಾಲೆಗೆ ಅವನು ಮಾಡುವಂತಹ ಕಾರ್ಯಗಳ ಬಗ್ಗೆ ಇಲ್ಲಿ ವ್ಯಕ್ತವಾಗಿದೆ. ಈ ನಾಟಕದಲ್ಲಿ ಶಿಕ್ಷಕರು ಕೇವಲ ಸಂಬಳಕ್ಕೋಸ್ಕರ ಕೆಲಸ ಮಾಡುತ್ತಿದ್ದರು. ಅವರು ಬರುತ್ತಿದ್ದುದೂ ಸಹ ಎಂಟು ದಿನಕ್ಕೊಮ್ಮೆ ಬಂದರೂ ಸಹ ಇತರ ಕೆಟ್ಟ ಚಟುವಟಿಕೆಗಳಾದ ಇಸ್ಪೀಟು ಜೂಜಾಟದಲ್ಲಿ ತಲ್ಲೀನರಾಗುತ್ತಿದ್ದರು. ಇದರಿಂದಾಗುವಂತಹ ಪರಿಣಾಮಗಳ ಬಗ್ಗೆ ಈ ನಾಟಕದಿಂದ ತಿಳಿದುಕೊಳ್ಳಬಹುದು. ಊರಿನ ಪ್ರತಿಯೊಬ್ಬರೂ ಶಿಕ್ಷಕರ ಮೇಲೆ ತಮ್ಮದೇ ಆದಂತಹ ನೋಟವನ್ನು ಹೊಂದಿರುತ್ತಾರೆ. ಅದ್ದರಿಂದ ಶಿಕ್ಷಕರು ಉತ್ತಮವಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ. ಆದರೆ ಈ ನಾಟಕದಲ್ಲಿ ಶಿಕ್ಷಕರ ಬಗ್ಗೆ ಊರಿನ ವ್ಯಕ್ತಿಗಳು ಅತಿಯಾದ ತಿರಸ್ಕಾರ

ಮನೋಭಾವ ಹೊಂದಿರುತ್ತಾರೆ. ಇದಕ್ಕೆ ಪ್ರಮುಖ ಕಾರಣವೇನೆಂದರೆ ಅಲ್ಲಿನ ಹಲವು ಶಿಕ್ಷಕರು, ಶಾಲೆಗೆ ಸರಿಯಾದ ವೇಳೆಯಲ್ಲಿ ಬರದೆ, ಬಂದರೂ ಸಹ ಇತರ ಕಾರ್ಯಗಳಲ್ಲಿ ತೊಡಗಿ ಶಾಲೆಯ ಮಕ್ಕಳಿಗೆ ಅನ್ಯಾಯ ಮಾಡುತ್ತಿರುತ್ತಾರೆ. ಇದರಿಂದಾಗಿ ಮಕ್ಕಳ ಮೇಲೆ ಕೆಟ್ಟದಾದಂತಹ ಪರಿಣಾಮವನ್ನು ಬೀರುತ್ತದೆ. ಪ್ರತಿಯೊಬ್ಬ ಶಿಕ್ಷಕರೂ ಇದೇ ರೀತಿ ಇರುತ್ತಾರೆ ಎಂದರೆ ತಪ್ಪು, ಕೆಲವು ಒಳ್ಳೆಯ ವ್ಯಕ್ತಿಗಳೂ ಸಹ ಇರುತ್ತಾರೆ ಎಂಬುದಕ್ಕೆ ಈ ಹಳ್ಳಿಮೇಷ್ಟ್ರು ನಾಟಕದಲ್ಲಿ ಬರುವ ಮೇಷ್ಟ್ರು ಸಾಕ್ಷಿ.

ಶಾಲೆಯ ಬಗ್ಗೆ, ಮಕ್ಕಳಬಗ್ಗೆ, ಊರಿನ ಬಗ್ಗೆ ಅತೀಯಾದ ಚಿಂತನೆಯನ್ನು ಮಾಡುವಂತಹ ಶಿಕ್ಷಕನನ್ನು ಈ ನಾಟಕದಲ್ಲಿ ಕಾಣಬಹುದಾಗಿದೆ. ಇಲ್ಲಿ ಶಿಕ್ಷಕರು, ಕೇವಲ ತಮ್ಮ ಕರ್ತವ್ಯವನ್ನು ನಿರ್ವಹಿಸದೆ, ಶಾಲೆಯ ಮಕ್ಕಳ ಅಭಿವೃದ್ಧಿಗೆ ಶ್ರಮಿಸುವಂತಹ ನಿಸ್ವಾರ್ಥ ಸೇವೆಯನ್ನು ಮಾಡುತ್ತಾರೆ. ಭಾನುವಾರ ರಜೆಯಿದ್ದರೂ ಸಹ ಶಾಲೆಯಲ್ಲಿ ತಮ್ಮ ಕೆಲಸ ಕಾರ್ಯವನ್ನು ಮಾಡುವಂತಹ ಶಿಕ್ಷಕರ ಉತ್ಸಾಹವನ್ನು ಈ ನಾಟಕದಲ್ಲಿ ಶಾಸ್ತ್ರಿಗಳು ಗುರ್ತಿಸಿದ್ದಾರೆ. ಕೇವಲ ಪಾಠ ಮಾಡಿ ಸಂಬಳ ತೆಗೆದುಕೊಳ್ಳದೇ ಶಾಲೆಗೆ ಬೇಕಾಗುವ ಕೊಠಡಿಗಳ ಬಗ್ಗೆ ಚಿಂತನೆ ಮಾಡುತ್ತ ಅದಕ್ಕೆ ಬೇಕಾಗುವಂತಹ ಏರ್ಪಾಟನ್ನು ಮಾಡಲು ಪ್ರಯತ್ನಿಸುತ್ತಾರೆ. ಹಾಗೂ ಯಶಸ್ಸನ್ನು ಸಹ ಹೊಂದುತ್ತಾರೆ. ಮಕ್ಕಳಿಗೆ ತಮಗೆ ತಿಳಿದಂತಹ ಸಂಪೂರ್ಣವಾದ ವಿದ್ಯೆಯನ್ನು ಧಾರೆಯೆರೆಯುವಂತ ಶಿಕ್ಷಕರು ಈ ಹಳ್ಳಿಮೇಷ್ಟ್ರು, ಇವರು ಮಕ್ಕಳಿಗೆ ಅಪಾಯಬಂದರೆ ತಮ್ಮ ಪ್ರಾಣವನ್ನು ಸಹ ಲೆಕ್ಕಿಸದೆ ಮಕ್ಕಳ ಪ್ರಾಣವನ್ನು ಕಾಡಿರುಡುತ್ತಾರೆ. ಇಂತಹ ಶಿಕ್ಷಕರ ಬಗ್ಗೆ ಊರಿನ ಜನರು ಯಾವ ರೀತಿ ಭಾವನೆಯನ್ನು ಹೊಂದಿದ್ದರು ಎಂಬುದಾಗಿ ಶಾಸ್ತ್ರಿಗಳು ವಿಶ್ಲೇಷಣಾತ್ಮಕವಾಗಿ ತಿಳಿಯಪಡಿಸಿದ್ದಾರೆ.

ಹಳ್ಳಿಗಳಲ್ಲಿ ಅತಿಯಾದ ರಾಜಕೀಯವನ್ನು ಕಾಣಬಹುದು. ಯಾರಾದರೂ ಒಬ್ಬರ ಹತ್ತಿರ ಹೆಚ್ಚಾಗಿ ಮಾತನಾಡಿದರೂ ಸಹ ಅವನನ್ನು ಅವರ ಕಡೆಯವರೆಂದೇ ಬಣ್ಣಿಸುತ್ತಾರೆ. ಅಂತೆಯೇ ಈ ಹಳ್ಳಿ ಚಿತ್ರ ನಾಟಕದಲ್ಲಿ ಮೇಷ್ಟ್ರು ಯಾರಾದರೂ ಊರಿನ ಜನರ ಹತ್ತಿರ ಮಾತಾಡಿದರೆ ಅದನ್ನು ರಾಜಕೀಯ ಎಂದೇ ಊರಿನ ಮುಖಂಡರು ಪರಿಗಣಿಸುತ್ತಿದ್ದರು. ಇಂತಹ ಸ್ಥಿತಿಯಲ್ಲಿ ಮೇಷ್ಟ್ರು ಯಾವ ರೀತಿ ಇವರಿಗೆ ತಿಳಿ ಹೇಳಿ ಶಾಲೆಯನ್ನು ಕಟ್ಟುತ್ತಾರೆ ಎಂಬುದನ್ನು ಶಾಸ್ತ್ರಿಗಳು ಇಲ್ಲಿ ವಿವರಿಸಿದ್ದಾರೆ.

ಹಳ್ಳಿಯಲ್ಲಿ ಒಬ್ಬರನ್ನು ಕಂಡರೆ ಇನ್ನೊಬ್ಬರಿಗೆ ಆಗುವುದಿಲ್ಲ ಇಂತಹ ಸಂದರ್ಭದಲ್ಲಿ ಮೇಷ್ಟ್ರು ಒಂದು ಶಾಲೆಯನ್ನು ಕಟ್ಟಿಕೊಡಿ ಎಂದು ಊರಿನ ಮುಖಂಡರಲ್ಲಿ ಪ್ರಸ್ತಾಪಿಸಿದಾಗ, ಅವರವರ ಮಧ್ಯೆ ಜಗಳವೇರ್ಪಟ್ಟಿತ್ತು. ಇದರಿಂದಾಗಿ ಶಾಲೆಯ ಕಟ್ಟಡದ ಬಗ್ಗೆ ಯಾರೂ ಕಾಳಜಿ ವಹಿಸುವುದಿಲ್ಲ.

ಹಳ್ಳಿಮೇಷ್ಟ್ರು ಶಾಲೆಯನ್ನು ಕಟ್ಟಲು ಬೇಕಾಗುವ ಹಣವನ್ನು ಗಳಿಸಲು ಜನರಿಂದ ಒಂದು ನಾಟಕವನ್ನು ಆಡಿರಿ ಎನ್ನುವಂತಹ ಸಲಹೆಯನ್ನು ನೀಡಿದರು. ಆದರೆ ಊರಿನ ಮುಖಂಡರು, ತಾವು

ಈ ಪಾತ್ರವಹಿಸಬೇಕು, ಆ ಪಾತ್ರ ವಹಿಸಬೇಕು ಎನ್ನುವಂತಹ ಧೋರಣೆಯನ್ನು ಹೊಂದಿರುವುದರ ಪರಿಣಾಮವಾಗಿ ನಾಟಕ ಪ್ರದರ್ಶನವಾಗಲೇ ಇಲ್ಲ, ಇಂತಹ ಪರಿಸ್ಥಿತಿಯಲ್ಲಿ ಮೇಷ್ಟ್ರು ಮಾಡುವ ಉತ್ತಮ ಕಾರ್ಯಗಳಿಗೆ ಜನರು ಓಗೊಟ್ಟರು.

ಊರಿನಲ್ಲಿ ಆಗುವಂತಹ ಅನೇಕ ತೊಂದರೆಗಳಿಗೆ ಹಾಗೂ ಮಕ್ಕಳಿಗೆ ಆಗಿರುವಂತಹ ಹಲವಾರು ಕಷ್ಟ, ನೋವುಗಳಿಗೆ ಮೇಷ್ಟ್ರು ಉತ್ತಮವಾಗಿ ಸ್ಪಂದಿಸುತ್ತಾರೆ. ಇದನ್ನು ಮನಗಂಡ ಊರಿನ ಜನರು ಇವರ ಮೇಲೆ ಅಪಾರವಾದ ನಂಬಿಕೆಯನ್ನಿಡುತ್ತಾರೆ. ಹಾಗೂ ಎಲ್ಲರೂ ಜೊತೆಗೂಡಿ ಮೇಷ್ಟ್ರು ಮಾಡುವ ಎಲ್ಲಾ ಕೆಲಸಕಾರ್ಯಗಳಿಗೆ ತಮ್ಮದೇ ಆದಂತಹ ಶ್ರಮವನ್ನು ವಹಿಸುತ್ತಾರೆ. ಈ ನಾಟಕದಲ್ಲಿ ಮೇಷ್ಟ್ರು ಜನರಿಂದ ಯಾವುದೇ ರೀತಿಯ ಹಣವನ್ನು ಬಯಸದೆ ಅವರಿಂದ ಶ್ರಮವನ್ನು ಬಯಸಿದರು. ಶ್ರಮಾಧಾನದಿಂದ ಶಾಲೆಯನ್ನು ಕಟ್ಟಲು ಬಯಸಿದರು.

ಈ ನಾಟಕದಲ್ಲಿ ಹಳ್ಳಿ ಮೇಷ್ಟ್ರು ಮಕ್ಕಳಿಗೆ ನಿಸ್ವಾರ್ಥ ಸೇವೆಯನ್ನು ಸಲ್ಲಿಸುತ್ತಾರೆ. ಹಾವು ಕಡಿದ ಹುಡುಗನಿಗೆ ಶುಶ್ರೂಷೆಯನ್ನು ಮಾಡುತ್ತಾರೆ, ಇವರು ಮಕ್ಕಳಿಂದ ಅಥವಾ ಮಕ್ಕಳ ಮನೆಯವರಿಂದ ಯಾವುದೇ ಉಪಕಾರವನ್ನು ಬಯಸದೇ ಸೇವೆಯನ್ನು ಸಲ್ಲಿಸುತ್ತಾರೆ. ತಮ್ಮ ಪ್ರಾಣವನ್ನು ಲೆಕ್ಕಿಸದೆ, ಕೆರೆಯಲ್ಲಿ ಬಿದ್ದಂತಹ ಬಾಲಕನನ್ನು ಕಾಪಾಡಿದ ಶಿಕ್ಷಕರು ಬಯಸಿದ್ದು ಜನರ ಶ್ರಮದಿಂದ ಶಾಲೆಯ ಕಟ್ಟಡವನ್ನು ಕಟ್ಟಬೇಕೆಂದು, ಅದಕ್ಕಾಗಿಯೇ ಮೇಷ್ಟ್ರು ಸ್ವತಃ ನಾಟಕವನ್ನೇ ಬರೆದು ಜನರಿಂದ ಪ್ರದರ್ಶಿಸಿ ಅದರಿಂದ ಬರುವಂತಹ ಹಣದಿಂದ ಶಾಲೆಯನ್ನು ನಿರ್ಮಾಣ ಮಾಡಬೇಕೆಂಬ ಅಭಿಲಾಷೆಯನ್ನು ಹೊಂದಿದ್ದರು.

ತಮ್ಮ ತಪ್ಪಿನ ಅರಿವಾಗಿ, ಊರಿನ ಜನರು ಮೇಷ್ಟ್ರುವಿನಲ್ಲಿ ಕ್ಷಮೆ ಕೇಳಿ ತಾವು ನಿಮಗೆ ಸಂಪೂರ್ಣವಾಗಿ ಸಹಕಾರ ನೀಡಲು ಒಪ್ಪಿಗೆ ನೀಡಿದ್ದನ್ನು ಶಾಸ್ತ್ರಿಗಳು ಈ ನಾಟಕದಲ್ಲಿ ವಿವರವಾಗಿ ತಿಳಿಯಪಡಿಸುತ್ತಾರೆ. ಹಳ್ಳಿಮೇಷ್ಟ್ರು ನಾಟಕದಲ್ಲಿ ಒಬ್ಬ ಮೇಷ್ಟ್ರು ಹಳ್ಳಿ ಜನರ ಮನಸ್ಸನ್ನು ಯಾವ ರೀತಿ ಗೆಲ್ಲಬಲ್ಲ ಅಥವಾ ತಿದ್ದಬಲ್ಲ ಎನ್ನುವುದನ್ನು ಶಾಸ್ತ್ರಿಗಳು ತುಂಬಾ ಚೆನ್ನಾಗಿ ವಿಶ್ಲೇಷಿಸಿದ್ದಾರೆ. ಈ ನಾಟಕದಲ್ಲಿ ಉಂಟಾದಂತಹ ಪರಿಣಾಮದಿಂದಾಗಿ ಮೀರಾಸಾಬಿಹಳ್ಳಿಯಲ್ಲಿ ಶಾಲಾ ಕೊಠಡಿಗಳು ನಿರ್ಮಾಣವಾಗಿವೆ ಎನ್ನುವಂತಹ ಶಾಸ್ತ್ರಿಗಳು ವಾಸ್ತವವಾಗಿ ಹೇಳಬಯುಸುತ್ತಾರೆ. ಹಳ್ಳಿಮೇಷ್ಟ್ರು ನಾಟಕವು ಉತ್ತಮವಾಗಿಯೇ ಮುಕ್ತಾಯವನ್ನು ಕಂಡಿತು, ಹಾಗೂ ಹಳ್ಳಿಯ ಜನರೆಲ್ಲರೂ ಊರಿನ ಯಾವುದೇ ಕಾರ್ಯಕ್ಕೂ ಮೇಷ್ಟ್ರೇ ಅಂತಿಮ, ಎನ್ನುವ ಅಭಿಪ್ರಾಯಕ್ಕೆ ಬಂದಿರುವುದನ್ನು ಶಾಸ್ತ್ರಿಗಳು ವಿವರಿಸಿದ್ದಾರೆ.

ಈ ಹಳ್ಳಿಮೇಷ್ಟ್ರು ನಾಟಕದಲ್ಲಿ ಬರುವಂತಹ ಭಾಷೆಯು ಹಳ್ಳಿ ಜನರು ಮಾತನಾಡುವಂತಹ ಜನಸಾಮಾನ್ಯರ ಭಾಷೆಯಾಗಿದೆ. ಪ್ರತಿಯೊಬ್ಬರಿಗೂ ಅರ್ಥವಾಗುವಂತೆ ಶಾಸ್ತ್ರಿಗಳು ರಚಿಸಿದ್ದಾರೆ.

ಸ್ತ್ರೀ ಪಾತ್ರಗಳೇ ಇಲ್ಲದ ಈ ನಾಟಕ 'ಹಳ್ಳಿಮೇಷ್ಟ್ರು' ಆಗಿರುವುದು ಶಾಸ್ತ್ರಿಗಳ ವಿಶೇಷತೆಯನ್ನು ಎತ್ತಿ ತೋರಿಸುತ್ತದೆ.

ಕೇವಲ ಹಳ್ಳಿಯ ಮುಖಂಡರಲ್ಲಿ ಮಾತ್ರ ದ್ವೇಷಾಸೂಯೆ ಇರುವುದಲ್ಲದೆ ಹಳ್ಳಿಯ ಸಾಮಾನ್ಯ ಜನರಲ್ಲೂ ಸಹ ಅಂತಹುದೇ ಆದಂತಹ ಮನೋಭಾವವನ್ನು ಹೊಂದಿದ್ದು. ಹಳ್ಳಿಯ ಜನರು ಪ್ರತಿಯೊಂದು ವಿಷಯಕ್ಕೂ ರಾಜಕೀಯವನ್ನು ಬಳಸುವುದನ್ನು ಈ ನಾಟಕದಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಹಳ್ಳಿಮೇಷ್ಟ್ರು ನಾಟಕವು ಜನಸಾಮಾನ್ಯರಿಗೆ ಉತ್ತಮವಾದ ಮನೋಭಾವವನ್ನು ಬೆಳೆಸಲು ಸಹಕಾರಿಯಾಗಿದೆ, ಹಾಗೂ ಶಿಕ್ಷಕನು ಊರಿನವರ ಜೊತೆ ಯಾವ ರೀತಿ ಸ್ಪಂದಿಸಬೇಕು, ಅವರಿಂದ ಯಾವ ರೀತಿ ಶಾಲೆಗೆ ಉಪಯೋಗ ಪಡೆಯಬೇಕು ಎಂಬುವ ಕಥಾ ತಂತ್ರವನ್ನು ಕೃಷ್ಣಶಾಸ್ತ್ರಿಗಳು ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ.

## ಅಡಿಟಿಪ್ಪಣಿ

೦೧. ಸಂಯುಕ್ತ ಕರ್ನಾಟಕ ೨.೫.೬೬

## ಅಧ್ಯಾಯ - ನಾಲ್ಕು

# ಬೆಳಗೆರೆ ಕೃಷ್ಣಶಾಸ್ತ್ರಿಯವರ ಕುರಿತು ಸಾಹಿತಿಗಳ, ವಿದ್ವಾಂಸರ, ವಿಮರ್ಶಕರ ಅಭಿಪ್ರಾಯಗಳು

### ಬಿಳಿ ಬಟ್ಟೆಯ ಸನ್ಯಾಸಿ

ಶ್ರೀ ಶಾಸ್ತ್ರಿಗಳು ಬಿಳಿಯ ಬಟ್ಟೆಗಳನ್ನು ಧರಿಸಿರುವ ಸನ್ಯಾಸಿ, ಆತನ ತಲೆ ಬೋಳಿಸಿಲ್ಲದಿರಬಹುದು, ಮನ ಬೋಳಾಗಿದೆ. ತನ್ನ ತೋಟದ ಮಧ್ಯದಲ್ಲಿ ಒಂದು ಗುಡಿಸಲನ್ನು ನಿರ್ಮಿಸಿಕೊಂಡು, ಅಲ್ಲಿ ವಾಸಿಸುತ್ತಿರುವ ಆತ 'ಪದ್ಮಪತ್ರಮಿವಾಂಭಸ'ನಂತೆ ಬಾಳುತ್ತಿದ್ದಾರೆ. ದಿನದ ಬಹುಕಾಲವನ್ನು ಧ್ಯಾನದಲ್ಲಿ ಕಳೆಯುವ ಈ ಬೈರಾಗಿ ಮನೆಗೆ ಬಂದವರಿಗೆ ಅವರು ಇರುವಷ್ಟು ದಿನ ಅಶನವಸನಗಳನ್ನು ನೀಡುತ್ತಾರೆ. ಆತನ ಮನೆಗೆ ಬೀಗವಿಲ್ಲ, ಸುಧಾಮನ ಮನೆಯಾದುದರಿಂದ ಕಳ್ಳತನದ ಭಯವಿಲ್ಲ, ನಾಳೆಗೇನು ಎಂಬ ಅಳುಕಿಲ್ಲ ಅವರ ನಿದ್ದೆನಿಗರ್ವಿ, ಹಾಸಿಗೆ ಬೇಡ, ಹೊದಿಕೆ ಬೇಡ, ಎಲ್ಲೆಂದರೆ ಅಲ್ಲಿ, ಹೇಗೆಂದರೆ ಹಾಗೆ ಅವರನ್ನು ನಿದ್ರೆ ಗಾಢವಾಗಿ ಆಲಂಗಿಸುತ್ತದೆ. ಚಿಂತೆಯಿಲ್ಲದವರಿಗೆ ಸಂತೆಯಲ್ಲಿ ನಿದ್ದೆ ಎಂಬ ಹಾಗೆ ಭಯವೆಂಬುದು ಆತನ ಬಳಿ ಸುಳಿಯುವುದಿಲ್ಲ ಹತ್ತಿರದಲ್ಲಿ ಹಾವು ಹರಿಯುತ್ತಿದ್ದರೆ ಅದರ ಪಾಡಿಗೆ ಅದು ಹೋಗುತ್ತದೆ. ಪಾಪ, ಅದರ ಮನೆಗೆ ನಾವು ಬಂದಿದ್ದೇವೆ ಎನ್ನುತ್ತಾರೆ. ಹಾಗೆಂದು ಆತನ ಜಡಸ್ವಭಾವವನ್ನು ಆರೋಪಿಸುವಂತಿಲ್ಲ, ಧ್ಯಾನದಿಂದ ಬಹಿರ್ಮುಖನಾದಾಗ ಆತ ಪಾದರಸದಷ್ಟು ಚುರುಕು, ಇದನ್ನು ಹತ್ತಿರವಿದ್ದೇ ಅರ್ಥಮಾಡಿಕೊಳ್ಳಬೇಕು. ಏನು ಅರ್ಥ ಮಾಡಿಕೊಳ್ಳಬೇಕು!

**ತ.ಸು.ಶಾಮರಾಯ (ಚಿನ್ಮಯಿ ಗ್ರಂಥದಿಂದ)**

ಪ್ರತಿಭಾ ಸಂಪನ್ನವಾದ ವಂಶದಲ್ಲಿ ಹುಟ್ಟಿದ ಕೃಷ್ಣಶಾಸ್ತ್ರಿಯವರು ಕವಿತಾ ರಂಗವನ್ನು ಪ್ರವೇಶಿಸಿರುವುದು ಸ್ವಾಭಾವಕವಾಗಿಯೇ ಇದೆ. ಚಿಕ್ಕಂದಿನಲ್ಲಿಯೇ ದುರಂತವನ್ನು ಕಂಡ ಶ್ರೀ ಶಾಸ್ತ್ರಿಗಳು ನೀವು ವೈರಾಗ್ಯಪರರಾಗಿ ದೈವ ಚಿಂತನೆಯಲ್ಲಿ ತಲ್ಲೀನರಾಗಿ ಸ್ಥಿತ ಪ್ರಜ್ಞೆಯನ್ನು ಸಾಧಿಸಿದ್ದಾರೆ. ಇಂದು ಅವರು ಒಬ್ಬ ವ್ಯಕ್ತಿಯಲ್ಲ, ಒಂದು ಸಂಸ್ಥೆ ಸಂಜೆಯ ವೇಳೆ ಶಾಸ್ತ್ರಿಗಳು ಏಕನಾದವನ್ನು ಮಿಡಿಯುತ್ತಾ ತಾವೇ

ರಚಿಸಿದ ಗೀತೆಗಳನ್ನು ಹಾಡುವರು ಸುತ್ತಲು ಹತ್ತಾರು ಜನರು ನೆರೆದು... ಯಾವುದೋ ಅಲೌಕಿಕವಾದ ವಾತಾವರಣದಲ್ಲಿ ಸಾತ್ವಿಕ ಭಾವನೆಗಳ ಅಲೆಗಳ ಮೇಲೆ ತೇಲಿಹೋಗುತ್ತಾರೆ... ಅಲ್ಪದಲ್ಲಿ ಕಲ್ಪವನ್ನು ಎತ್ತಿತೋರುವ ಸುಂದರ ಕವಿತೆಗಳು.

ತ.ಸು.ಶಾಮರಾಯರು

ಬೆಳಗೆರೆ ಕೃಷ್ಣಶಾಸ್ತ್ರಿಗಳು ಅಪೂರ್ವ ಅನುಭಾವಿ, ಅನುಭಾವವೆನ್ನುವುದು ನಿಗೂಢದ ಕಥೆ ಅಲ್ಲ; ಅದು ಚೈತನ್ಯದ ಕ್ಷಣಗಳನ್ನು, ತಿಳಿವಿನ ವಾತಾವರಣವನ್ನು ಹುಡುಕುವ; ಹಾಗೆ ಹುಡುಕಿದ್ದನ್ನು ಅರಿಯುವ; ನಿಬ್ಬೆರಗಿನಿಂದ ಮೆಲುಕುಹಾಕುವ; ಗತಿಶೀಲತೆ, ಇಂಥ ಗತಿಶೀಲತೆಯ ಅನುಭವವನ್ನು ಕೃಷ್ಣಶಾಸ್ತ್ರಿಗಳು ಮೈದುಂಬಿ, ಮನದುಂಬಿ, ತನುತುಂಬಿ ಪಡೆದಿದ್ದಾರೆ. ಹಾಗೆ ಪಡೆದಿದ್ದನ್ನು ಅನುಭವವಾಗಿಯೇ ಮಾತುಗಳಲ್ಲಿ ಹಂಚಿಕೊಂಡದ್ದಾರೆ. ತಿಳಿವಿನ ಅನುಬವಕ್ಕೆ ಮಾತುಗಳ ಮೂಲಕ ಪಾರದರ್ಶಕತೆ ಸಾಧ್ಯವಾಗುವುದು ಅನುಭಾವದ ಒಂದು ಮುಖ್ಯ ಸಾಧನೆ. ಕೃಷ್ಣಶಾಸ್ತ್ರಿಗಳ ಮಾತುಗಳಿಗೆ ಈ ಗುಣ ಲಭ್ಯವಾಗಿದೆ. ಇಲ್ಲಿ ರೂಪು ತಳೆದ ಹಲವಾರು ವ್ಯಕ್ತಿ ಚಿತ್ರಗಳು ಕೃಷ್ಣಶಾಸ್ತ್ರಿಗಳ ಸೂಕ್ಷ್ಮ ಅವಲೋಕನದ ಭಾಗವಾಗಿಯೇ ಮೈತಳೆದು ಬಂದಂಥವು. ಇವುಗಳು ನೆನಪಿನ ಭಾಗಗಳೆಂಬಂತೆ ಆಗದೆ ಅರಿವಿನ ರೂಪಕಗಳಾಗಿ ಹೊಸ ಅನುಭವ ಸಾಧ್ಯತೆಯನ್ನು ಓದುಗರಲ್ಲಿ ಹುಟ್ಟಿಸುತ್ತವೆ. ಆದ್ದರಿಂದಲೇ ಗೋಕಾಕದ ಪಾರವ್ವ, ಕಾಳಿಂಗ ಕೃಷ್ಣ, ತೋಪಿನ ಹನುಮಣ್ಣ, ಮಹಮದ್ ಹಯಾತ್ ಸಾಬ್, ಗಾಂಧೀಜಿ, ಗುಜ್ಜಪ್ಪ, ಗಗ್ಗರಂಗಪ್ಪ ಮುಂತಾದ ವ್ಯಕ್ತಿತ್ವಗಳು ವಿಭಿನ್ನವಾಗಿ ಮರುಹುಟ್ಟು ಪಡೆದಂತಾಗಿದೆ. ಕೃಷ್ಣಶಾಸ್ತ್ರಿಗಳ ಮಾತು ಒಂದು ಪುಟ್ಟ ಸಂಕಥನದಂತೆ, ಓದುಗನ ಎದೆಯೊಳಗೆ ಹಗುರವಾಗಿ ಇಳಿಯುವ ಈ ಮಾತುಗಳು ಲೋಕಕಲ್ಯಾಣದ ಆಶಯವನ್ನು ಒಳಸೂತ್ರದಂತೆ ಮಿಡಿಯುತ್ತಿರುವುದು ಓದುಗನ ಒಳಗಣ್ಣಿಗೆ ಕಾಣಲೇಬೇಕು, “ಅನುಭಾವದ” ಇನ್ನೊಂದು ಅಗಾಧ ಗುಣಸತ್ವ ಇದು.

ಬಸವರಾಜ ಕಲ್ಗುಡಿ

ಬೆಳೆಗೆರೆ ಕೃಷ್ಣಶಾಸ್ತ್ರಿಗಳು ಸಮಕಾಲೀನ ನವೋದಯ ಸಾಹಿತಿಗಳನ್ನು ಅಕ್ಷರಶಃ ಆರಾಧಿಸಿದವರು, ಡಿ.ವಿ.ಜಿ, ಮಾಸ್ತಿ, ಬೇಂದ್ರೆ, ದೇವುಡು, ಜಿ.ಪಿ.ರಾಜರತ್ನಂ, ವೀ. ಸೀತಾರಾಮಯ್ಯ ಮೊದಲಾದ ಮಹನೀಯರ ಕೆಲವು ವ್ಯಕ್ತಿ ಚಿತ್ರಗಳು ಇಲ್ಲಿವೆ. ಸಾಧ್ಯವಾದಷ್ಟು ಸಾಹಿತಿಗಳ ಮಾತನ್ನೇ ನೆನಪಿಟ್ಟುಕೊಂಡು ಅವುಗಳ ಮೂಲಕವಾಗಿ ಇಡೀ ವ್ಯಕ್ತಿತ್ವದ ಪುನರ್ ನಿರ್ಮಾಣ ಮಾಡಿರುವುದರಿಂದ ಈ ಚಿತ್ರಗಳಿಗೆ ಜೀವಂತಿಕೆ ಬಂದಿದೆ. ಸಾಹಿತಿಗಳ ಒಡನಾಟ ಕೃಷ್ಣಶಾಸ್ತ್ರಿಗಳಿಗೆ ಒಂದು ಪ್ರಿಯವಾದ ಹವ್ಯಾಸ, ಅವರ ಸಹವಾಸದಲ್ಲಿ ಇವರು ಬಾವಾವಿಷ್ಟರಾಗುತ್ತಾರೆ.

ಕೀರ್ತಿನಾಥ ಕುರ್ತುಕೋಟಿ

(ಸಾಹಿತಿಗಳ ಸ್ಮೃತಿ ಮುನ್ನುಡಿಯಿಂದ)

ಭಗವಂತನಿಗೆ ಅನಂತ ಪ್ರಣಾಮಗಳು, ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು ಬದುಕಿರುವ ದಿನಗಳಲ್ಲಿ ನಮಗೆ ಜನನ ಕೊಟ್ಟಿದ್ದಾನೆ, ಆ ಪುಣ್ಯ ಚೇತನವನ್ನು ಕಣ್ಣಾರೆ ಕಾಣುವ, ಮನಸಾರೆ ಮಾತನಾಡುವ ಭಾಗ್ಯ ಕರುಣಿಸಿದ್ದಾರೆ ಎಂದು.

ಸಾ.ಶಿ.ಮರುಳಯ್ಯ

೧. ಮುಕುಂದೂರು ಯತಿ ಪ್ರೀತಿ
ಗಳಿಸಿಕೊಂಡಾತ
ಪ್ರಸಾದ ಪಡೆದಾತ
ಯೇಗ್ದಾಗೆಲ್ಲಾ ಐತೆ
ಎಂಬ ಮಾತಿನ ಸ್ಮೃತಿ
ತುಂಬಿಕೊಂಡಾತ
ಮರ್ಮ ಅರಿತು ಕೊಂಡಾತ
ಅವನಿವನ ಬಲ್ಲ
ಇವನವನ ಬಲ್ಲ
ಜೊತೆ ಕಡಲೆಬೆಲ್ಲ
ಕೃಷ್ಣ - ಕದೀಮ
ರಾಮ - ರಹೀಮ
ಇವನೊಳಗೆ ಅವನು
ಅವನೊಳಗೆ ಇವನು
ವಿರಹದುರಿಯಲ್ಲಿ ಪುಟವಿಟ್ಟ ಚಿನ್ನ
ಇವನೆಲ್ಲರಣ್ಣ
ಇವನ ಮಾತು
ಪೋಣಿಸಿದ ಮುತ್ತು
ಜ್ಯೋತಿರ್ಲಿಂಗ
ವಿಸ್ಫುಲಿಂಗ
ಆತ್ಮಲಿಂಗ
ಮಾಲಿಂಗ
ಮೆಲ್ನುಡಿ
ನಲ್ನುಡಿ
ಆತ್ಮದರ್ಶಕ

ಪಾರದರ್ಶಕ
ಇಳೆಗಿಳಿದ ಶಶಿತುಣುಕು
ಬೆಳೆಗೆರೆಯ ಬೆಳಕು

ಸಿ.ಎಂ.ಚನ್ನಬಸವಯ್ಯ ಎಂ.ಎಸ್‌ಸಿ

೨. ಬೆಳೆಗೆರೆಯ ಬೆಳಕು

ಆವೊಂದು ದಿನದಾವೊಂದುಗಳಿಗೆ
ನವರಸವ ತುಂಬಿತೀ ಬಾಳಿಗೆ
ಆಗ ಸಂಜೆಯಾಗಿತ್ತು
ಮನನಂಜು ಕುಡಿದಿತ್ತು
ಮಂಜು ಕವಿದಿತ್ತು
ಆಗ ಬೆಳಗೆರೆಯ ಬೆಳಕು ಕಂಡಿತ್ತು
ಮಂಜು ಕರಗಿಸಿತು
ನಂಜನಿಳಿಸಿತ್ತು
ನನ್ನ ಕಾಣಿಸಿತು
ಧನ್ಯವಾಗಿಸಿತು.
ಯಾರಾತ
ಅವದೂತ ಸುತ,
ಋಷಿದೂತ,
ಅವನೂ ಅವದೂತ,
ಎಲ್ಲರಿಂ ಕಲಿತಾತ,
ಕಲಿಸಿದಾತ,
ಈಗ ತಾತ,
ಸಂತರೊಡನಾಡಿದಾತ
ಇವನೋರ್ವ ಸಂತ,
ಸಂತೆಯೊಳಗಿನ ಸಂತ,
ಅಲ್ಲ ಏಕಾಂತ ಸಂತ,
ನಿಶ್ಚಿಂತ, ಪ್ರಶಾಂತ,
ಚಂದ್ರಶೇಖರನುದರ
ಸಾಗರದ ಚಂದ್ರ

ಸುಗುಣ ಸಾಂದ್ರ
ಎದೆ ಕಡಲ ನುಕ್ಕಿಸುವ
ಎದೆಯಳಲ ಕೆತ್ತೆಸೆವ
ಸಂದೇಶ ಪೂರಕ
ಸಂದೇಶ ಹಾರಕಾ
ಭಾವ ಪ್ರಸನ್ನ
ಸೇವಾ ಧುರೀಣ

**ಸಿ.ಎಂ.ಚನ್ನಬಸವಯ್ಯ ಎಂ.ಎಸ್ಸಿ**

(ಶ್ರೀ ಶರಣ ಸದನ, ೭ನೇ ಕ್ರಾಸ್, ಜೆ.ಸಿ.ಆರ್.ಎಕ್ಸ್‌ಟೆಂಷನ್, ಚಿತ್ರದುರ್ಗ)

ಬೆಳಗೆರೆ ಕೃಷ್ಣಶಾಸ್ತ್ರಿಯವರ ಮಿತ್ರವರ್ಗ ಯಾರೂ ಅಸೂಯೆ ಪಡುವಂತಹದ್ದು ಇವರ ಕೃತಿಗಳನ್ನು ಓದುವ, ಓದಿ ಮೆಚ್ಚುವ ಆರಾಧಿಸುವ ವಾಚಕವೃಂದ, ಬಂಧು-ಮಿತ್ರರು, ಇವರೆಲ್ಲರ ನಡುವೆ ಶಾಸ್ತ್ರಿಗಳು ಅವರ ಬೆಳ್ಳನೆ ಉಡುಪಿನಿಂದಲು, ನಿರಂತರ ಸಂಚಾರ ಶೀಲತೆಯಿಂದಲೂ ಈ ಜಗತ್ತು ಎಂಬ ನೀಲಿ ಮೋಡದ ಹಿನ್ನೆಲೆಯಲ್ಲಿ ಆನಂದವಾಗಿ ಹಾರಾಡುತ್ತಿರುವ ಬೆಳ್ಳಕ್ಕಿಯನ್ನು ನೆನಪಿಸುತ್ತಾರೆ.ಈ ಬೆಳ್ಳಕ್ಕಿ ಹಾರುತ್ತಲೇ ಇರಲಿ, ಜಗತ್ತು ಅದನ್ನು ನೋಡುತ್ತ ಪದೇ ಪದೇ ಆನಂದ ಸಮಾಧಿಯನ್ನು ಸವಿಯುತ್ತಲೇ ಇರಲಿ.

**ಪ್ರಭುಶಂಕರ**

ಸರಿ ಸುಮಾರು ಅರವತ್ತು ವರ್ಷಗಳ ಬದುಕನ್ನು ಊರಿಂದ ಊರಿಗೆ, ಗುರುವಿನಿಂದ ಗುರುವಿಗೆ, ಸಾಧನೆಯಿಂದ ಸಾಧನೆಗೆ ಅಪ್ಪಟ ಪರಿವ್ರಾಜಕನಂತೆ ಏನನ್ನೋ ಹುಡುಕುತ್ತ ಎಲ್ಲವು ಸಿಕ್ಕಿಬಿಟ್ಟವನಂತೆ, ಸಿಕ್ಕಿದ್ದನ್ನೆಲ್ಲ ಅಲ್ಲಿಯೇ ಬಿಟ್ಟವನಂತೆ, ಅಲೆದು ಬಿಟ್ಟ ಅತನಿಗೆ ನೆನಪುಗಳದೊಂದು ಕೊರತೆಯೇ?

**ರವಿ ಬೆಳಗೆರೆ**

ಸಕಲ ಉಪನಿಷತ್ತಿನ ಸಾರವನ್ನು ಇದರಲ್ಲಿ ನಾನು ಕಂಡೆ

**ಲ.ನಾ.ಶಾಸ್ತ್ರಿ,**

ಯೇಗ್ದಾಗೆಲ್ಲಾ ಐತೆ ಕುರಿತು

(ಹಿರಿಯ ಸಾಹಿತಿಗಳು, ವೇದಾಂತಿಗಳು, ಮೈಸೂರು)

ನೀನು ಕೊಟ್ಟ ಪುಸ್ತಕ 'ಯೇಗ್ದಾಗೆಲ್ಲಾ ಐತೆ' ಓದಿಸಿ ಕೇಳಿದೆ... ಮೂಕ ವಿಸ್ಮಿತನಾದೆ, ಪರಮಾನಂದದ ಅನುಭವವಾಯಿತು.

**ತು.ಸು.ಶಾಮರಾಯ**

(ಕನ್ನಡ ನಿವೃತ್ತ ಪ್ರಾಚಾರ್ಯರು, ಸಾಹಿತಿಗಳು)

ಇದನ್ನು ಎರಡು ಬಾರಿ ಓದಿದ್ದೇನೆ, ಋಷಿಕೊಟ್ಟಿದೆ

ಸತ್ಯಕಾಮ, ಯೇಗ್ದಾಗೆಲ್ಲಾ ಐತೆ ಕುರಿತು

(ಖ್ಯಾತ ಸಾಹಿತಿಗಳು)

ಓದಿ ಮರೆಯಲಾಗದ ಅಪೂರ್ವಕೃತಿ, ಮುಕುಂದೂರು ಸ್ವಾಮಿಗಳ ಜೊತೆ ಕಳೆದ ದಿನಗಳನ್ನೂ ಅವರೊಡನೆಯ ಅನುಭವಗಳನ್ನು, ಅನುಭೂತಿಗಳನ್ನು ನಿರ್ಮಲವಾಗಿ, ಅತ್ಯಂತ ಪ್ರೀತಿಯಿಂದ ಮೂಡಿಸಿದ್ದಾರೆ... ವರ್ತಮಾನದ ಈ ಕಷ್ಟದ ಪರಿಸ್ಥಿತಿಯಲ್ಲಿ 'ಯೇಗ್ದಾಗೆಲ್ಲಾ ಐತೆ' ಒಂದು ಅಸಾಮಾನ್ಯ ಕೃತಿ.

ಈ ಪುಸ್ತಕದ ಭಾಷೆ ಮತ್ತು ಭಾವನೆಗಳ ಭಾಷೆ ಎರಡು ಒಂದಕ್ಕೊಂದು ಪಡಿಯಚ್ಚು ಆಗಿದೆ. ಸಾಂಪ್ರದಾಯಿಕ ಆಧ್ಯಾತ್ಮಿಕ ಭಾಷಿಕ ವಿನ್ಯಾಸವನ್ನು ಪಡೆಯದೆ ಅನುಭಾವಿಕ ಭಾಷಿಕ ವಿನ್ಯಾಸ ಪಡೆದಿದೆ. ಈ ಪುಸ್ತಕವನ್ನು ಓದುವುದೇ ಒಂದು ದಿವ್ಯಾನುಭವದ ಸಂಗತಿ.

**ಪ್ರೊ.ಮಲ್ಲೇಪುರಂ, ಜಿ ವೆಂಕಟೇಶ್**

(ಸಾಹಿತಿಗಳು, ವಿಮರ್ಶಕರು)

ಸಾಹಿತ್ಯ ರಂಗದ ದಿಗ್ಗಂತಿಗಳ ಒಡನಾಟ, ಸಮಾಜ ಸೇವೆಗೆ ಜೀವನ ಮುಡಿಪು ಪರಮ ಪೂಜ್ಯರಾದ ಮುಕುಂದೂರು ಸ್ವಾಮಿಗಳ ಸಹಚರ್ಯ, ಜೀವನಾನುಭವಗಳಿಂದ ಪರಿಪಕ್ವವಾಗಿ ಹೊರಬಂದ ಒಂದು ರಸಭರಿತ ಫಲ ಯೇಗ್ದಾಗೆಲ್ಲಾ ಐತೆ, ಯೋಗಸಿದ್ದರು ಜ್ಞಾನಸಿದ್ದರೂ ಆಗಿದ್ದರೆ ಅದು ಲೋಕದ ಪುಣ್ಯ, ಆಧ್ಯಾತ್ಮವನ್ನು ಸಾರಾಸಗಟಾಗಿ ತಿರಸ್ಕರಿಸುವವರು, ಸ್ವಾಮಿಗಳು ರಾಮಾಯಣಕ್ಕೆ ಕೊಡುವ ಅಂತರಾರ್ಥವನ್ನು ಮನನ ಮಾಡಬೇಕು. ಅವರು ಆಧ್ಯಾತ್ಮರಂಗದ ಪ್ರಖರದೀಪ, ಶ್ರೀ ಶಾಸ್ತ್ರಿಗಳು ಈ ಕೃತಿ ರಚಿಸಿ ಆಧ್ಯಾತ್ಮರಂಗ, ಸಾಹಿತ್ಯ ರಂಗಗಳೆರಡಕ್ಕೂ ಉತ್ತಮ ಕಾಣಿಕೆ ನೀಡಿದ್ದಾರೆ.

**ಅ.ರಾ.ಸೇ.ಭರಮಸಾಗರ**

**(ಖ್ಯಾತ ಸಾಹಿತಿಗಳು)**

ಶ್ರೀ ಸ್ವಾಮಿಗಳ ಜೀವನದಿಂದ ತುಂಬಾ ಪ್ರಭವಿತನಾಗಿದ್ದೇನೆ, ಮರುಭೂಮಿಯಲ್ಲಿ ಓಯಾಸಿಸ್‌ನಂತೆ ಮನಸ್ಸು, ಹೃದಯಗಳ ನೋವನ್ನು ಹರಿಸಿ ತಂಪೆರೆಯಬಲ್ಲ ಸ್ವಾಮಿಗಳು ಪ್ರಪಂಚದ ದೃಷ್ಟಿಯಲ್ಲಿ 'ನಿರಕ್ಷರ ಕುಕ್ಷಿ', ಪೂಜ್ಯ ಶ್ರಿ ಬೆಳಗೆರೆ ಕೃಷ್ಣಶಾಸ್ತ್ರಿಗಳು ಸ್ವಾಮಿಗಳ ಜೀವನವನ್ನು ಚಿತ್ರಿಸಿ ಅಜ್ಞಾತವಾಗಿ ಉಳಿದು ಹೋಗಬಹುದಾಗಿದ್ದ ಅನರ್ಘ್ಯ ರತ್ನವೊಂದನ್ನು ಪರಿಚಯಿಸಿದ್ದಾರೆ, 'ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ' ಅಲ್ಲವೇ?

**ಟಿ.ಎಸ್.ವೆಂಕಣ್ಣಯ್ಯ**

(ನಿವೃತ್ತ ಪ್ರಾಂಶುಪಾಲರು ಎಸ್.ಜೆ.ಸಿ.ಬಿ.ಎಂ.ಕಾಲೇಜು, ಶೃಂಗೇರಿ)

ಯೇಗ್ದಾಗೆಲ್ಲಾ ಐತೆ ಕನ್ನಡ ಅನುಭಾವ ಸಾಹಿತ್ಯಕ್ಕೆ ಬೆಲೆಕಟ್ಟಲಾಗದ ಒಂದು ಕಾಣಿಕೆ, ಮುಕುಂದೂರು ಸ್ವಾಮಿಗಳ ಕಾರಣೀಕಗಳನ್ನು ಕಣ್ಣಿಗೆ ಕಟ್ಟುವ ಹಾಗೆ ಬಿಡಿಸಿಡುವ ಈ ಪುಸ್ತಕದಲ್ಲಿ ಬರುವ ಆಧ್ಯಾತ್ಮಿಕತೆ ಆಕಾಶ ಕುಸುಮವಲ್ಲ, ನೆಲದಲ್ಲೇ ಅರಳಿದ ಬೆಟ್ಟತಾವರೆಯಂತದು, ಪ್ರದೇಶ ವಿಶಿಷ್ಟ, ಸಾಂಸ್ಕೃತಿಕ ವಿವರಗಳ ಮೂಲಕ ಪ್ರದೇಶ ವಿಶಿಷ್ಟ ನುಡಿ ಗುಟ್ಟುಗಳಲ್ಲಿ ಕಡೆದಿಟ್ಟಿರುವ ಆ ಅವಿಸ್ಮರಣೀಯ ಚೈತನ್ಯ ಅಲ್ಲಿ, ಇಲ್ಲಿ ಎಲ್ಲೆಲ್ಲಿಯೂ ಸಲ್ಲುವಂಥದು. ಈ ಪುಸ್ತಕವನ್ನು ಬರೆದವರು, ಅಚ್ಚು ಹಾಕಿಸಿದವರು, ಓದುವರು, ಮನನ ಮಾಡುವರು ಎಲ್ಲರೂ ಪರಾ ಪ್ರತಿಭೆಯ ಸಜೀವ ಸ್ಪಂಧನಗಳಲ್ಲಿ ಪಾಲುಗೊಳ್ಳುತ್ತಾರೆ. ಮುಕುಂದೂರು ಸ್ವಾಮಿಗಳೆಂಬ ನಡೆಲಿಂಗ ಈ ಪುಸ್ತಕದ ಮೂಲಕ ನುಡಿಲಿಂಗವಾಗಿದೆ.

**ಹೆಚ್.ಎಸ್.ಶಿವಪ್ರಕಾಶ್**

## ಅಧ್ಯಾಯ - ಐದು

# ಅಧ್ಯಯನದ ಫಲಿತಗಳು ಮತ್ತು ಸಮಾರೋಪ

ಬೆಳಗೆರೆ ಕೃಷ್ಣಶಾಸ್ತ್ರಿಗಳದು ಮೂಲತಃ ಶಿಕ್ಷಕ ವೃತ್ತಿ, ಅವರ ಸೇವೆ ಗುರ್ತಿಸಿ ಭಾರತ ಸರ್ಕಾರ ರಾಷ್ಟ್ರಪ್ರಶಸ್ತಿ ಸಹ ಕೊಟ್ಟಿದೆ. ಅಂದು ಪ್ರಶಸ್ತಿ ಕೊಡುವವರ ತೂಕ ಜಾಸ್ತಿ ಎಂದು ಭಾವಿಸಿ ರಾಷ್ಟ್ರಪತಿಗಳಿಂದ ಸಂತೋಷವಾಗಿ ಪ್ರಶಸ್ತಿ ಸ್ವೀಕರಿಸಿದರು. ಇತ್ತೀಚಿಗೆ ಕರ್ನಾಟಕ ಸರ್ಕಾರ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ಘೋಷಿಸಿತು. ಶಾಸ್ತ್ರಿಗಳು ಮಾತ್ರ ಪ್ರಶಸ್ತಿ ಒಲ್ಲೆ ಎಂದು ಎಡಗೈಲಿ ನೂಕಿದರು. ಶಾಸ್ತ್ರಿಗಳ ಜಾಯಮಾನವೇ ಅಂತಹದು. ಮನಸಿಗೆ ಹಿಡಿಸಿದ್ದನ್ನು ಹೊತ್ತು ಮಾಡುತ್ತಾರೆ. ಬೇಡವೆನಿಸಿದ್ದನ್ನು ಕಿರುಗಣ್ಣಿನಲ್ಲೂ ನೋಡುವುದಿಲ್ಲ. ಅಪ್ಪಟ ಗಾಂಧೀವಾದಿ ಜೀವಿತದಲ್ಲಿ ಎಂದೂ ಹರಳೆ ಬಟ್ಟೆ ಬಿಟ್ಟು ಬೇರೆ ತೊಟ್ಟಿಲ್ಲ, ಕಾಲಿಗೆ ಹಳ್ಳಿಯಲ್ಲಿ ತಯಾರಾದ ಮೆಟ್ಟೇ ಆಗಬೇಕು. ಒಂದೇ ದಿನ ಹೆಂಡತಿ, ಮಗುವನ್ನು ಕಳೆದುಕೊಂಡ ಶಾಸ್ತ್ರಿಗಳು ವಯಸ್ಸಿದ್ದರೂ ಮರು ಮದುವೆಗೆ ಒಪ್ಪಲಿಲ್ಲ. ಅಪ್ಪ ಬಲವಂತ ಮಾಡಿದ್ದಕ್ಕೆ ಒಂದೇದಿನ ತನ್ನ ಎಲ್ಲಾ ಹಲ್ಲುಗಳನ್ನು ಕೀಳಿಸಿ, ಈಗ ಹೆಣ್ಣು ಕೊಡಿಸು ಎಂದು ಸವಾಲು ಹಾಕಿದ್ದರು. "ಈ ಪ್ರಾಂತದ ಮಕ್ಕಳಿಗೆ ವಿದ್ಯಾಭ್ಯಾಸ ಇಲ್ಲ ನಮಾರಲ್ಲಿ ಒಂದು ಸ್ಕೂಲು ಕಟ್ಟಿಸು" ಎಂಬ ಅಪ್ಪ ಬೆಳಗೆರೆ ಚಂದ್ರಶೇಖರಶಾಸ್ತ್ರಿಗಳು ಹೇಳಿದ್ದೇ ತಡ ಅಣ್ಣ ಸೀತಾರಾಮಶಾಸ್ತ್ರಿಗಳ ಹೆಸರಲ್ಲೊಂದು ಪ್ರೌಢಶಾಲೆ ಆರಂಭಿಸಿಯೇ ಬಿಟ್ಟರು. ಈ ಶಾಲೆ ಆರಂಭವಾದದ್ದು ೧೯೬೭ರಲ್ಲಿ ಈಗ ಪದವಿಪೂರ್ವ ಕಾಲೇಜಾಗಿದೆ, ವೃತ್ತಿಶಿಕ್ಷಣ ನೀಡುತ್ತಾ ಅಪ್ಪಟ ದೇಶೀ ಪ್ರತಿಭೆಗಳನ್ನು ಬೆಳೆಸುತ್ತಿದೆ. ಶಾಲೆ ಕಾಲೇಜಿನಲ್ಲಿ ಸುಮಾರು ೮೦೦ ಮಂದಿ ಕಲಿಯುತ್ತಿದ್ದಾರೆ. ಇವರಿಗೆಲ್ಲಾ ಉಚಿತ ಶಿಕ್ಷಣ ಇದರೊಂದಿಗೆ ವೇದಾವತಿ ಉಚಿತ ವಿದ್ಯಾರ್ಥಿ ನಿಲಯ ನಡೆಸುತ್ತಿದ್ದಾರೆ. ಇಲ್ಲಿಯವರೆಗೆ ಸರ್ಕಾರದಿಂದ ಒಂದು ರೂಪಾಯಿ ಕೂಡ ಅನುದಾನ ಪಡೆದಿಲ್ಲ ಎಂಬುದು ವಿಶೇಷ. ಶಾಸ್ತ್ರಿಗಳು ಶಾಲೆ ಹಾಸ್ಟೆಲ್ ನಡೆಸಲು ಯಾರನ್ನೂ ಬೇಡಿದವರಲ್ಲ, ಯಾರಾದರೂ ಒಮ್ಮೆ ಶಾಲೆಗೆ ಬೇಟಿ ನೀಡಿದರೆ ಸ್ವ ಇಚ್ಛೆಯಿಂದ ಹಣ ಕಳಿಸುವುದುಂಟು. ಶಾಸ್ತ್ರಿಗಳ ತೋಟದ ಉತ್ಪನ್ನವೆಲ್ಲಾ ಹಾಸ್ಟೆಲ್‌ಗೇ.

ಮುಕುಂದೂರು ಸ್ವಾಮಿಗಳ ಜೀವನ ವೃತ್ತಾಂತ ಕುರಿತು ಶಾಸ್ತ್ರಿಗಳು ಬರೆದ ಯೇಗ್ದಾಗೆಲ್ಲಾ ಐತೆ ಕೃತಿ ಪ್ರಕಟವಾದಂದಿನಿಂದ ಮುಕುಂದೂರು ಸ್ವಾಮಿಗಳೇ ಹಾಸ್ಟೆಲ್ ನಡೆಸುತ್ತಿದ್ದಾರೆ ಎಂದು ನಂಬಿದ್ದಾರೆ. ಇಂತಹ ಶಾಲೆ ಹಾಸ್ಟೆಲ್ ನಡೆಸುತ್ತಿದ್ದೇನೆ ಎಂದು ಎಲ್ಲೂ ಶಾಸ್ತ್ರಿಗಳು ಹೇಳುವುದಿಲ್ಲ. ಪ್ರಚಾರದಿಂದ ಬಲುದೂರ, ಇತ್ತೀಚೆಗೆ ಬೆಳಗೆರೆ ಕೃಷ್ಣಶಾಸ್ತ್ರಿಗಳ ಹೆಸರಿನಲ್ಲಿ ಅಭಿಮಾನಿಗಳ ಸಂಘ ಚಳ್ಳಕೆರೆಯಲ್ಲಿ ಅಸ್ತಿತ್ವಕ್ಕೆ ಬಂದಿದೆ. ಇದಕ್ಕವರು ಒಪ್ಪಲೇ ಇಲ್ಲ. ಶಾಸ್ತ್ರಿಗಳು ಪೂಜೆ, ಪುನಸ್ಕಾರ, ಸಂಧ್ಯಾವಂದನೆ, ಜಾತಿ, ಜನಿವಾರ ಯಾವುದನ್ನೂ ನಂಬುವುದಿಲ್ಲ, ಆದ್ರೆ ದೇವರು, ಪವಾಡ, ಎರಡನ್ನೂ ನಂಬದ ಇವರು ಪವಾಡ ಸದೃಶ ಜನರೊಂದಿಗೆ ಅದೆಷ್ಟೋ ವರ್ಷಗಳನ್ನು ಕಳೆದಿದ್ದರು. ಶಾಸ್ತ್ರಿಗಳು ಮೇಷ್ಟ್ರಾಗಿ ಕೆಲಸ ಮಾಡಿದ ಪ್ರತಿ ಊರಿನಲ್ಲೂ ಒಂದೊಂದು ಸ್ಕೂಲು ಕಟ್ಟಿಸಿಬಿಟ್ಟಿದ್ದಾರೆ. ಇವರು ಕೇವಲ ಶಾಲೆಗಳನ್ನಲ್ಲದೇ, ಆಸ್ಪತ್ರೆ, ರಸ್ತೆಗಳು, ಚರಂಡಿ, ರಂಗಮಂದಿರಗಳನ್ನು ಕೂಡ ಜನರ ಶ್ರಮಧಾನದಿಂದ ಕಟ್ಟಿಸಿದ್ದಾರೆ ಎನ್ನುವುದು ವಿಶೇಷ.

ಸಾಹಿತಿಗಳ ಮನೆತನದಲ್ಲಿ ಬೆಳೆದು ಬಂದ ಇವರು ಸಂಸ್ಕಾರದಿಂದಾಗಿ ಸ್ವಂತ ಅಧ್ಯಯನ ಶೀಲತೆಯಿಂದ ಕನ್ನಡ, ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಯನ್ನು ಆಳವಾಗಿ ಅಧ್ಯಯನ ಮಾಡಿ ಕೃತಿ ರಚನೆಯಲ್ಲೂ ತೊಡಗಿ ಕನ್ನಡಕ್ಕೆ ಅನೇಕ ಮೌಲಿಕ ಕೃತಿಗಳನ್ನು ನೀಡಿದ್ದಾರೆ. ಹಳ್ಳಿಚಿತ್ರ, ಹಳ್ಳಿಮೇಷ್ಟ್ರು ಆಕಾಶವಾಣಿಯಲ್ಲೂ ಪ್ರಸಾರವಾಗಿದೆ. ಅವರ ಯೇಗ್ದಾಗೆಲ್ಲಾ ಐತೆ, ಸಾಹಿತಿಗಳ ಸ್ಮೃತಿ ಮರೆಯಲಾದೀತೇ, ಎಲೆಮರೆಯ ಅಲರು, ತುಂಬಿ ಪ್ರಮುಖ ಕೃತಿಗಳು ಯೇಗ್ದಾಗೆಲ್ಲಾ ಐತೆ ಆಧ್ಯಾತ್ಮ ಪ್ರಧಾನವಾದ ಕೃತಿ. ಗ್ರಾಮ್ಯಭಾಷೆಯ ಸೊಗಡಿನಿಂದ ಕೂಡಿದ್ದು, ಎಲ್ಲರ ಮನ್ನಣೆಗೂ ಪಾತ್ರವಾಗಿದೆ. ಅಂತೆಯೇ ಇಂಗ್ಲೀಷ್, ಹಿಂದಿ, ಮರಾಠಿ, ತೆಲುಗು ಭಾಷೆಗಳಿಗೂ ಭಾಷಾಂತರ ಹೊಂದಿರುವುದು ಅವರ ಹಿರಿಮೆಗೆ ಸಾಕ್ಷಿಯಾಗಿದೆ. ಇದೇ ಕೃತಿ ಇನ್ನೂ ಐದು ಭಾರತೀಯ ಭಾಷೆಗಳಿಗೆ ಅನುವಾದಗೊಳ್ಳಲಿದೆ. ಶಾಸ್ತ್ರಿಗಳು ಹಲವಾರು ಅನುವಾದಿತ ಕೃತಿಗಳನ್ನು ರಚಿಸಿದ್ದಾರೆ. ಅನೇಕ ಜಾನಪದ ವಿದ್ವಾಂಸರಿಗೆ ಸಂಪನ್ಮೂಲ ಶಕ್ತಿಯಾಗಿ ಮಾರ್ಗದರ್ಶನ ನೀಡಿದ್ದಾರೆ. ಸಾವಿರ ಸಾವಿರ ಪದಗಳನ್ನು ಎದೆಯಲ್ಲಿ ಹುದುಗಿಸಿಕೊಂಡಿದ್ದ ಸಿರಿಯಜ್ಜಿಯಂತವರನ್ನು ಜಾನಪದ ಸಾಹಿತ್ಯ ಪ್ರಪಂಚಕ್ಕೆ ಪರಿಚಯಿಸಿ ರಾಜ್ಯಮಟ್ಟದಲ್ಲಿ ಪ್ರಶಸ್ತಿಗಳಿಸಲು ಕಾರಣಕರ್ತರಾಗಿದ್ದಾರೆ, ಮಲ್ಲಪ್ಪನ ಹಳ್ಳಿಯ ಪ್ರಾಥಮಿಕ ಶಾಲಾಶಿಕ್ಷಕರು ದಿ.ಅಲ್ಲಿಸಾಬ್ ರವರ ನಲ್ನುಡಿ ನಿಘಂಟು ಕರ್ನಾಟಕ ರಾಜ್ಯಪಾಲರಾದ ಸನ್ಮಾನ್ಯ ಟಿ.ಎನ್.ಚತುರ್ವೇದಿಯವರ ಸುವರ್ಣ ಹಸ್ತದಿಂದ ಬಿಡುಗಡೆಯಾಗಲು ಶ್ರಮಿಸಿದ್ದಾರೆ. ಗಾಂಧಿ, ವಿನೋಭಾ, ರಮಣ ಮಹರ್ಷಿ, ಜಿ.ಕೆ.ಮುಂತಾದವರಿಂದ ಪ್ರಭಾವಿತರಾಗಿರುವ ಶ್ರೀಯುತ ಕೃಷ್ಣಶಾಸ್ತ್ರಿಗಳು ಹಳ್ಳಿಯೊಂದರಲ್ಲಿ ತಮ್ಮಷ್ಟಕ್ಕೇ ತಾವೇ ಸಮಾಜ ಸೇವೆ ಮಾಡಿಕೊಂಡಿರುವವರು.

ಕೃಷ್ಣಶಾಸ್ತ್ರಿಗಳು ರಚಿಸಿದಂತಹ ಹಲವು ಪ್ರಕಟಿತ ಕೃತಿಗಳಿಂದ ನಾವು ಕಂಡುಕೊಂಡಂತಹ ಅಧ್ಯಯನದ ಫಲಿತಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

ಎ. ಕೃಷ್ಣಶಾಸ್ತ್ರಿಯವರ ಯೇಗ್ದಾಗೆಲ್ಲಾ ಐತೆ ಕೃತಿಯಲ್ಲಿ ಬರುವ ಶ್ರೀ ಮುಂಕುಂದೂರು ಸ್ವಾಮಿಗಳ ಲೋಕಾನುಭವ, ಆಧ್ಯಾತ್ಮಿಕ ದೃಷ್ಟಿ, ಅವರದೇ ರೀತಿಯ ವಿಚಾರ, ನಿರೂಪಣಾ ವಿಧಾನ, ಸದಾ ನಕ್ಕು

ನಗಿಸುವ ಸಹಜ ಆನಂದ, ಎಲ್ಲದರಲ್ಲೂ ಅವರದು ವಿಚಿತ್ರ ರೀತಿ, ಯಾವುದೇ ಜಾತಿ ಮತ ಸಂಘ, ಮೇಲು ಕೀಳುಗಳನ್ನು ಮೀರಿ ನಿಂತ ಅವರೊಂದಿಗೆ ಉಂಟಾದ ದೀರ್ಘ ಸಂಪರ್ಕದಿಂದ ಶಾಸ್ತ್ರಿಗಳು ಈ ಕೃತಿರಚಿಸಿದ್ದಾರೆ. ಇಂತಹ ಕೃತಿಯಲ್ಲಿ ಶಾಸ್ತ್ರಿಯವರನ್ನು ಆಧ್ಯಾತ್ಮ ಚಿಂತಕರಾಗಿಯೂ ಅನುಭಾವಿಯಾಗಿಯೂ, ಸಮಾಜ ಜೀವಿಯಾಗಿಯೂ ಹಾಗೂ ಸಾಹಿತಿಗಳಾಗಿಯೇ ನೋಡುವಂತಹ ರೀತಿಯಲ್ಲಿ ಈ ಸಂಶೋಧನಾ ಕಾರ್ಯದಲ್ಲಿ ವ್ಯಕ್ತವಾಗಿದೆ.

ಬಿ. ಹಲವಾರು ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾದ ಸಾಹಿತಿಗಳ ಬಗ್ಗೆ ಶಾಸ್ತ್ರಿಯವರು ಹೊಂದಿದಂತಹ ಒಡನಾಟಗಳನ್ನು, ನೆನಪುಗಳನ್ನು ತಮ್ಮ ಕೃತಿಯಾದ ಸಾಹಿತಿಗಳ ಸ್ಮೃತಿಯಲ್ಲಿ ತಿಳಿಯಪಡಿಸಿರುವುದನ್ನು ಈ ಸಂಶೋಧನಾ ಕೃತಿಯಲ್ಲಿ ಸಾದರ ಪಡಿಸಲಾಗಿದೆ.

ಸಿ. ಗ್ರಾಮೀಣ ಪ್ರತಿಭೆಗಳು, ಸಮಾಜಸೇವಾ ಬಂಧುಗಳು, ಆಧ್ಯಾತ್ಮಿಕ ಸಾಧಕರು, ಹಾಗೂ ಸಾಹಿತಿಗಳೊಂದಿಗೆ ಕೃಷ್ಣಶಾಸ್ತ್ರಿಗಳು ಹೊಂದಿದಂತಹ ಒಡನಾಟದ ನೆನಪುಗಳನ್ನು 'ಮರೆಯಲಾದಿತೇ' ಮತ್ತು 'ಎಲೆಮರೆಯ ಅಲರು' ಕೃತಿಗಳಲ್ಲಿ ವಿವರಣಾತ್ಮಕವಾಗಿ ಹಾಗೂ ವಿಶ್ಲೇಷಣಾತ್ಮಕವಾಗಿ ಹಿಡಿದಿಟ್ಟಿದ್ದನ್ನು ಈ ಸಂಶೋಧನಾ ಕೃತಿಯಲ್ಲಿ ಸಾದರ ಪಡಿಸಲಾಗಿದೆ. ಈ ಕೃತಿಯಲ್ಲಿ ರೂಪು ತಳೆದ ಹಲವಾರು ವ್ಯಕ್ತಿಗಳು ಶಾಸ್ತ್ರಿಗಳ ಸೂಕ್ಷ್ಮ ಅವಲೋಕನದ ಭಾಗವಾಗಿಯೇ ಮೈತಳೆದು ಬಂದಂಥವು ಇವುಗಳು ನೆನಪಿನ ಭಾಗಗಳೆಂಬಂತೆ ಆಗದೆ ಅರಿವಿನ ರೂಪಕಗಳಾಗಿ ಹೊಸ ಅನುಭವ ಸಾಧ್ಯತೆಯನ್ನು ಓದುಗರಲ್ಲಿ ಹುಟ್ಟಿಸುತ್ತವೆ.

ಡಿ. ಶಾಸ್ತ್ರಿಯವರ 'ತುಂಬಿ' ಕವನ ಸಂಗ್ರಹದಲ್ಲಿ ಒಳನೋಟ, ಒಳತುಡಿತ, ಸರಳ ಹಾಗೂ ನುಡಿಕಟ್ಟು ಬಳಕೆ, ಆಧ್ಯಾತ್ಮಸುಳುಹು, ಹೊಳಪುಗಳು, ಶ್ರುಶಾಸ್ತ್ರಗಳ ಜ್ಞಾನ ಅನುಭವ, ಅನುಭಾವ ಸಿದ್ಧಿಗಳಿಂದ ಹೊರಹೊಮ್ಮಿದ ಭಾವಗಳೆನ್ನುವಂತೆ ಈ ಸಂಶೋಧನಾ ಕೃತಿಯಲ್ಲಿ ವಿವರಣಾತ್ಮಕವಾಗಿ ತಿಳಿಯಪಡಿಸಲಾಗಿದೆ.

ಇ. ಸ್ತ್ರೀ ಪಾತ್ರಗಳೇ ಇಲ್ಲದ ನಾಟಕ 'ಹಳ್ಳಿಮೇಷ್ಟ್ರು', ಹಳ್ಳಿ ಜನರ ಮನೋಭಾವ ಅಲ್ಲಿನ ಮುಖಂಡರಲ್ಲಿರುವ ಪರಸ್ಪರ ದ್ವೇಷಾಸೂಯೆ, ಅವರ ಮಧ್ಯೆ ನಿಂತು ನಿಸ್ವಾರ್ಥಸೇವೆ ಸಲ್ಲಿಸಬಯಸುವ ಉಪಾಧ್ಯಾಯನ ಸ್ಥಿತಿಗತಿ ಇವುಗಳನ್ನು ಹೃದಯಂಗಮವಾಣಿ, ವಾಸ್ತವವಾಗಿ ಚಿತ್ರಿಸಿರುವ ಶಾಸ್ತ್ರಿಗಳು, ಈ ನಾಟಕ ಕಥಾತಂತ್ರ ಹಾಗೂ ಪರಿಣಾಮಕಾರೀ ಮುಕ್ತಾಯದ ದೃಷ್ಟಿಯಿಂದ ಶ್ರೇಷ್ಠ ದರ್ಜೆಗೆ ಸೇರುತ್ತದೆ. ಇಂತಹ 'ಹಳ್ಳಿಮೇಷ್ಟ್ರು' ನಾಟಕದ ಬಗ್ಗೆ ವಿವರಣಾತ್ಮಕವಾಗಿ ಈ ಸಂಶೋಧನಾ ಕೃತಿಯಲ್ಲಿ ವ್ಯಕ್ತ ಪಡಿಸಲಾಗಿದೆ.

ಒಟ್ಟಾರೆಯಾಗಿ ಈ ಕಿರು ಪ್ರಬಂಧ ಮೂಲಕ 'ಕೃಷ್ಣಶಾಸ್ತ್ರಿಗಳ ಜೀವನ ಹಾಗೂ ಕೃತಿಗಳ' ವೈಶಿಷ್ಟ್ಯಗಳನ್ನು ಗುರುತಿಸುತ್ತಾ ಸಮಗ್ರವಾಗಿ ಅಧ್ಯಯನ ಮಾಡುವುದರ ಜೊತೆಗೆ, ಅವರನ್ನು ಕೇವಲ ಸಾಹಿತಿಗಳಾಗಿ ಮಾತ್ರ ನೋಡದೆ, ಅವರನ್ನು ಒಬ್ಬ ಸಮಾಜ ಸೇವಾ ಜೀವಿಯಾಗಿ, ಅನುಭಾವಿಯಾಗಿ ಆಧ್ಯಾತ್ಮ ಚಿಂತಕರಾಗಿಯೂ ಕಾಣಲಾಗಿದೆ.

# ಅನುಬಂಧಗಳು

೧. ಪರಾಮರ್ಶ ಗ್ರಂಥಗಳು

  ಎ. ಪ್ರಧಾನ ಆಕರಗಳು

  ಬಿ. ಆನುಷಂಗಿಕ ಆಕರಗಳು

೨. ಪ್ರಶಸ್ತಿ, ಅಭಿನಂದನೆ, ಸನ್ಮಾನಗಳು

೩. ಬೆಳಗೆರೆ ಕೃಷ್ಣಶಾಸ್ತ್ರಿಗಳ ಸಂಕ್ಷಿಪ್ತ ಜೀವನ ವಿವರ

೪. ನಾಟಕ ಪ್ರದರ್ಶನ ಸಮಾರಂಭಗಳು ಮತ್ತು ಬಹುಮಾನಗಳು

೫. ವಕ್ತೃ ವಿವರ

೬. ಛಾಯಾಚಿತ್ರಗಳು

# ೧. ಪರಾಮರ್ಶ ಗ್ರಂಥಗಳು

## ಎ. ಪ್ರಧಾನ ಆಕರಗಳು


೦೧. ತುಂಬಿ, (ಕವನ ಸಂಕಲನ) ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಅಬಿಜ್ಞಾನ ಪ್ರಕಾಶನ, ೧೯೬೨, ೨೦೦೦, ದಾವಣಗೆರೆ

೦೨. ಯೇಗ್ದಾಗೆಲ್ಲಾ ಐತೆ (ಶ್ರೀಮುಕುಂದೂರು ಸ್ವಾಮಿಗಳನ್ನು ಕುರಿತ ನೆನಪು ಅಂತರ್ ಧ್ವನಿ) ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಅಭಿನಮ ಪ್ರಕಾಶನ, ೧೯೯೪, ೨೦೦೭, ಬೆಂಗಳೂರು.

೦೩. ಮರೆಯಲಾದೀತೇ? (ಗ್ರಾಮೀಣ ಪ್ರತಿಭೆಗಳು, ಸಮಾಜಸೇವಾ ಬಂಧುಗಳು, ಆಧ್ಯಾತ್ಮಿಕ ಸಾಧಕರು),
ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಅಭಿನವ ಪ್ರಕಾಶನ, ಬೆಂಗಳೂರು

೦೪. ಎಲೆಮರೆಯ ಅಲರು (ನೆನಪುಗಳು)
ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಅಭಿನವ ಪ್ರಕಾಶನ, ಬೆಂಗಳೂರು

೦೫. ಸಾಹಿತಿಗಳ ಸ್ಮೃತಿ (ಬೇಂದ್ರೆ, ವೀ.ಸಿ, ರಾಜರತ್ನಂ, ಡಿ.ವಿ.ಜಿ, ದೇವುಡು ಅವರೊಂದಿಗಿನ ನೆನಪು)
ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಮನೋಹರ ಗ್ರಂಥಮಾಲಾ, ಧಾರವಾಡ.

೦೬. ಹಳ್ಳಿ ಚಿತ್ರ (ನಾಟಕ)
ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಬೆಳಗೆರೆ ಅಭಿಮಾನಿ ಸಂಘ, ೨೦೦೭, ಚಳ್ಳಕೆರೆ

೦೭. ಹಳ್ಳಿಮೇಷ್ಟ್ರು (ನಾಟಕ)
ಲೇ, ಬೆಳಗೆರೆ ಕೃಷ್ಣಶಾಸ್ತ್ರಿ, ಅಭಿನವ ಪ್ರಕಾಶನ, ಬೆಂಗಳೂರು

೦೮. ಪಾಶುಪತಾಸ್ತ್ರ (ಅಪ್ರಕಟಿತ ನಾಟಕ)

೦೯. ಏಕಲವ್ಯ (ಅಪ್ರಕಟಿತ ನಾಟಕ)

೧೦. ಆಕಸ್ಮಿಕ (ಅಪ್ರಕಟಿತ ನಾಟಕ)

೧೧. ಸೋಹ್ರಾಬ್ ರುಸ್ತುಂ (ಅಪ್ರಕಟಿತ ನಾಟಕ)

೧೨. ವಿಚಿತ್ರ ಸಾಮ್ರಾಜ್ಯಂ (ಅಪ್ರಕಟಿತ ನಾಟಕ)

೧೩. ಹಿಂಗೂ ಮಾಡ್‌ನೋಡ್ರಿ ಈ (ಅಪ್ರಕಟಿತ ನಾಟಕ)

೧೪. ಅಂತರ್‌ಧ್ವನಿ (ಅನುವಾದ, ಮೂಲ, ಇನ್ನರ್‌ವಾಯ್ಸ್, ಲೇ.ಡಬ್ಲ್ಯೂ.ಸಿ.ಸ್ಯಾಂಡರ್ಸ್)

೧೫. ಆತ್ಮವಿಜ್ಞಾನ (ಮೂಲ: ಡಿ.ಸೈನ್ಸ್ ಆಫ್ ದಿ ಸೋಲ್, ಜಗಜಿತ್‌ಸಿಂಗ್ ಜಿ ಮಹಾರಾಜ್)

೧೬. ಅಯೋಧ್ಯಾ (ಅನುವಾದ, ಮೂಲ: ಗೋಪಾಲ ಪಾಂಡೆ, ದೆಹಲಿ)

೧೭. ಯೋಗವಾಣಿ (ಸಿದ್ಧಪುರುಷರ ಅನುಭವಗಳು)

## ಬಿ. ಆನುಷಂಗಿಕ ಆಕರಗಳು

೧. ಆಕಾಶದಗಲ ನಗುವಿನ ಅವಧೂತ (ಬೆಳಗೆರೆ ಕೃಷ್ಣಶಾಸ್ತ್ರಿಗಳನ್ನು ಕುರಿತು) ಸಂ.ಪಿ.ಚಂದ್ರಿಕಾ, ವಂದನಾ ಸತೀಶ್

೨. ಇದು ಎಂಥಾ ಜೀವನವಯ್ಯ (ಬೆಳಗೆರೆ ಚಂದ್ರಶೇಖರಶಾಸ್ತ್ರಿಗಳನ್ನು ಕುರಿತ ಲೇಖನಗಳು) ಸಂ.ಡಾ.ಎಂ.ವಿ.ಶ್ರೀನಿವಾಸ್, ಕೃಷ್ಣಮೂರ್ತಿ ಹನೂರು, ಭಾವನಾ ಪ್ರಕಾಶನ, ಬೆಂಗಳೂರು.

೩. ಖಾಸ್‌ಬಾತ್, ಲೇ.ರವಿಬೆಳಗೆರೆ, ಹಾಯ್‌ಬೆಂಗಳೂರು ಪತ್ರಿಕೆಗಳಲ್ಲಿ ಪ್ರಕಟ, ೨೦೦೧, ೨೦೦೨

೪. ಚಿನ್ಮಯಿ (ಅಭಿನಂದನಾ ಗ್ರಂಥ), ಚಿನ್ಮಯಿ ಪ್ರಕಾಶನ, ಚಿತ್ರದುರ್ಗ

೫. ನಲ್ನುಡಿ ನಿಘಂಟು, ಲೇ, ಅಲ್ಲಿಸಾಬ್ (ಕನ್ನಡ-ಕನ್ನಡ)

೬. ಮಾತು ನನ್ನೋಳ್ ಎಲ್ಲೇ! (ಬೆಳಗೆರೆ ಶ್ರೀ ಚಂದ್ರಶೇಖರಶಾಸ್ತ್ರಿಗಳ ಹಾಡುಗಳ ಸಂಕಲನ), ಸಂ.ಡಾ.ಆರ್.ಶೇಷಶಾಸ್ತ್ರಿ, ಅಭಿಜ್ಞಾನ ಪ್ರಕಾಶನ, ದಾವಣಗೆರೆ

## ೨. ಪ್ರಶಸ್ತಿ, ಅಭಿನಂದನೆ, ಸನ್ಮಾನಗಳು

* ಹಳ್ಳಿ ಚಿತ್ರ ನಾಟಕಕ್ಕೆ, ಶ್ರೇಷ್ಠನಾಟಕ ಪ್ರಶಸ್ತಿ, ಕೇಂದ್ರ ಸರ್ಕಾರದ ರಾಷ್ಟ್ರೀಯ ನಾಟಕ ಪುರಸ್ಕಾರ.
* ಮೈಸೂರು ರಾಜ್ಯ ಸರ್ಕಾರದಿಂದ ಉತ್ತಮ ಶಿಕ್ಷಕ ಪ್ರಶಸ್ತಿ (೧೯೭೨)
* ಕೇಂದ್ರ ಸರ್ಕಾರದಿಂದ ಉತ್ತಮ ಶಿಕ್ಷಕ ಪ್ರಶಸ್ತಿ.
* ಚಿತ್ರದುರ್ಗದಲ್ಲಿ ನಡೆದ ಧರ್ಮ ಸಮ್ಮೇಳನದಲ್ಲಿ ಸೇವಾ ರತ್ನ ಪ್ರಶಸ್ತಿ.
* ಚಿಕ್ಕಮಗಳೂರಿನ ಅಳಾಸಿಂಗಾಚಾರ್ ಪ್ರಶಸ್ತಿ.
* ನಾಲ್ಕನೆಯ ಚಿತ್ರದುರ್ಗ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.
* ಚಿನ್ಮಯಿ - ಚಿತ್ರದುರ್ಗದ ಅಭಿಮಾನಿಗಳಿಂದ ಅರ್ಪಿತವಾದ ಅಭಿನಂದನಾ ಗ್ರಂಥ.
* ಅರ್ಪಣೆ - ಚಿಕ್ಕಮಗಳೂರಿನ ಅಭಿಮಾನಿಗಳು ಅರ್ಪಿಸಿದ ಅಭಿನಂದನೆ.
* ಕುವೆಂಪು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪದವಿ.

ಬೆಳಗೆರೆಯಲ್ಲಿ ತಮ್ಮ ತಂದೆಯವರ ಆಸೆಯಂತೆ, ಅಣ್ಣ ಸೀತಾರಾಮಶಾಸ್ತ್ರಿಯವರ ನೆರವಿನೊಂದಿಗೆ ಶಾರದಾ ಮಂದಿರ ನಿರ್ಮಾಣ (೧೯೬೧) ನಂತರ ಸೀತಾರಾಮಶಾಸ್ತ್ರಿ ಪದವಿಪೂರ್ವಕಾಲೇಜು, ವೃತ್ತಿ ಶಿಕ್ಷಣ ಸಂಸ್ಥೆ, ವೇದಾವತಿ ವಿದ್ಯಾರ್ಥಿನಿಲಯ ಸ್ಥಾಪನೆ.

(ಈ ಹೊತ್ತಿಗೂ ಉಚಿತ ಊಟ, ಶಾಲಾ ಮಕ್ಕಳ ಫೀಸು ಇತ್ಯಾದಿಯನ್ನು ಶಾಸ್ತ್ರಿಗಳು, ಮತ್ತು ಅವರ ಅಭಿಮಾನಿಗಳು ಭರಿಸುತ್ತಿದ್ದಾರೆ)

ಟಿ.ಎಸ್.ವೆಂಕಣ್ಣಯ್ಯ, ಡಿ.ವಿ.ಜಿ, ಮುಂತಾದವರ ಜನ್ಮ ಶತಮಾನೋತ್ಸವ.

ವಸಂತ ಸಾಹಿತ್ಯೋತ್ಸವ ಸಮಾರಂಭಗಳ ಆಯೋಜನೆ.

ಜಾನಪದ ಕಂಪ್ಯೂಟರ್ ಸಿರಿಯಜ್ಜಿಯನ್ನು ಸಾಂಸ್ಕೃತಿಕ ಲೋಕಕ್ಕೆ ಪರಿಚಯಿಸಿದ್ದು, ಶ್ರೀ ಟೆಮಟಿ ಕ್ರಿಸ್ಟೋಫರ್, ಕೆ.ಹಿಲ್, ಶ್ರೀ ಪೀಟರ್ ಜೆಕ್ಲಾಸ್, ಶ್ರೀ ಆಂಡ್ರೂಸ್ ಮತ್ತು ತೀ.ನಂ.ಶಂಕರನಾರಾಯಣ, ಆರ್.ಶೇಷಶಾಸ್ತ್ರಿ, ಕೃಷ್ಣಮೂರ್ತಿ ಹನೂರು, ಬಸವರಾಜ ಕಲ್ಗುಡಿ ಮುಂತಾದ ಸಂಶೋಧಕರಿಗೆ ನೆರವು.

ಜಾನಪದ ಜಂಗಮ ಎಸ್.ಕೆ.ಕರೀಂಖಾನ್, ಸಿರಿಯಜ್ಜಿ ಮುಂತಾದವರನ್ನು ಬೆಳಗೆರೆ ಜನತೆಯ ಪರವಾಗಿ ಸನ್ಮಾನಿಸಿದ್ದು.

ತಿರುವಣ್ಣಾಮಲೆಯ ರಮಣ ಮಹರ್ಷಿ, ಆನಂದಾಶ್ರಮದ (ಕೇರಳ) ರಾಮದಾಸರು, ಬಾಗೂರಿನ ಶರಣಮ್ಮ, ಹೃಷಿಕೇಶದ ಶಿವನಂದಸ್ವಾಮಿ, ಮುಕುಂದೂರುಸ್ವಾಮಿ, ಜಿ.ಕೆ, ಗಾಂಧೀಜಿ, ಮಲ್ಲಾಡಿಹಳ್ಳಿಯ ರಾಘವೇಂದ್ರ ಸ್ವಾಮೀಜಿ, ವೀ.ಸಿ, ಬೇಂದ್ರೆ, ಡಿ.ವಿ.ಜಿ, ಮಾಸ್ತಿ, ರಾಜರತ್ನಂ, ದೇವುಡು, ಭೈರಪ್ಪ ನಿಟ್ಟೂರು ಶ್ರೀನಿವಾಸರಾವ್, ಕರೀಂಖಾನ್, ಹಾಮಾನಾ, ತ.ಸು.ಶಾಮರಾವ್, ಗಡಿಯಾರಂ ರಾಮಕೃಷ್ಣಶರ್ಮ, ತಿಪ್ಪೇಸ್ವಾಮಿ, ಎ.ಕೆ.ರಾಮಾನುಜನ್, ಸಿದ್ಧಯ್ಯ, ಕಾಳಿಂಗ ಕೃಷ್ಣ ಮುಂತಾದವರ ಜೊತೆಗಿನ ಒಡನಾಟ ಆಕಾಶವಾಣಿ ಮತ್ತು ಮುಖ್ಯ ಪತ್ರಿಕೆಗಳಲ್ಲಿ ಲೇಖನ, ಭಾಷಣ.

# ೪. ನಾಟಕ ಪ್ರದರ್ಶನ ಸಮಾರಂಭಗಳು ಮತ್ತು ಬಹುಮಾನಗಳು

ಹಳ್ಳಿಚಿತ್ರ ನಾಟಕವು ಸುಮಾರು ವರ್ಷಗಳಿಂದ ಅನೇಕ ಕಡೆ ಅನೇಕ ಸಮಾರಂಭಗಳಲ್ಲಿ ಪ್ರದರ್ಶಿಸಲ್ಪಟ್ಟು, ಸುವರ್ಣ ಪದಕ, ಷೀಲ್ಡ್ ಮುಂತಾದ ಬಹುಮಾನಗಳನ್ನು ಪಡೆದಿದೆ. ಅವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ತಿಳಿಯಬಹುದು.

೦೧. ಶಾಸಕರ ದಿನಾಚರಣೆ, ವಿಧಾನಸೌಧ, ಬೆಂಗಳೂರು, ೧೯೬೫

೦೨. ಕಾಂಗ್ರೆಸ್ ವಸ್ತುಪ್ರದರ್ಶನ, ಬೆಂಗಳೂರು, ೨೩.೦೪.೧೯೬೬

೦೩. ಅಖಿಲ ಕರ್ನಾಟಕ ನಾಟಕ ಸ್ಪರ್ಧೆ, ಅಜ್ಜಂಪುರ, ೧೯೫೫, ಸುವರ್ಣಪದಕ

೦೪. ಅಖಿಲ ಕರ್ನಾಟಕ ನಾಟಕ ಸ್ಪರ್ಧೆ, ತಿಪಟೂರು, ೧೯೬೪, ಸುವರ್ಣಪದಕ ಮತ್ತು ಷೀಲ್ಡ್

೦೫. ಕೈಲಾಸಂ ಸ್ಮಾರಕ ನಾಟಕ ಸ್ಪರ್ಧೆ, ದಾವಣಗೆರೆ, ೧೯೬೪, ಪ್ರಥಮ ಬಹುಮಾನ

೦೬. ನಾಟಕ ಸ್ಪರ್ಧೆ, ಹಾಸನ, ೧೯೬೫, ಷೀಲ್ಡ್

೦೭. ಯುವಜನೋತ್ಸವ, ಚಿತ್ರದುರ್ಗ, ೧೯೫೫, ಪ್ರಥಮ ಬಹುಮಾನ

೦೮. ಅಖಿಲ ಕರ್ನಾಟಕ ನಾಟಕ ಸ್ಪರ್ಧೆ, ಹಿರಿಯೂರು, ೧೯೫೭, ಬಹುಮಾನ

೦೯. ತಾಲ್ಲೂಕು ಸಮ್ಮೇಳನ, ಹಿರಿಯೂರು, ೧೯೫೮

೧೦. ಡಾ.ಮೋದಿಯವರ ನೇತ್ರ ಚಿಕಿತ್ಸಾ ಶಿಬಿರದ ಮುಕ್ತಾಯ ಸಮಾರಂಭ, ಚಳ್ಳಕೆರೆ, ೧೯೫೯

೧೧. ಅಖಿಲ ಕರ್ನಾಟಕ ನಾಟಕ ಸ್ಪರ್ಧೆ, ಭದ್ರಾವತಿ, ೧೯೫೭, ಬಹುಮಾನ

೧೨. ಝಾನ್ಸಿರಾಣಿ ದಿನಾಚರಣೆ, ಚಳ್ಳಕೆರೆ (ಮುಖ್ಯಮಂತ್ರಿ ಶ್ರೀ.ಕೆ.ಹನುಮಂತಯ್ಯನವರ ಅಧ್ಯಕ್ಷತೆಯಲ್ಲಿ)

ಅಲ್ಲದೆ, ಈ ನಾಟಕವು ಹುಳಿಯಾರ್, ಶಿರಸಿ, ದೇವನೂರು, ಸಕಲೇಶಪುರ, ಬೆಳಗೂರು ಮುಂತಾದ ಕಡೆಗಳಲ್ಲೂ ಅಭಿನಯಿಸಲ್ಪಟ್ಟು, ಅನೇಕ ಬಹುಮಾನಗಳನ್ನು ಪಡೆದಿದೆ.

## ೫. ವಕ್ತೃವಿವರ

| ಕ್ರ.ಸಂ | ಹೆಸರು | ವೃತ್ತಿ | ಊರು |
|---|---|---|---|
| ೦೧. | ಪ್ರೋ.ಮಲ್ಲೇಪುರಂ ಜಿ.ವೆಂಕಟೇಶ್ | ಖ್ಯಾತಸಾಹಿತಿಗಳು,ವಿಮರ್ಶಕರು | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೦೨. | ಡಾ.ಮೀರಾಸಾಬಿಹಳ್ಳಿ ಶಿವಣ್ಣ | ನಿವೃತ್ತ ಉಪನ್ಯಾಸಕರು | ಚಳ್ಳಕೆರೆ |
| ೦೩. | ಪ್ರೋ.ವೆಂಕಣ್ಣಾಚಾರ್ | ನಿವೃತ್ತ ಪ್ರಾಧ್ಯಾಪಕರು | ಚಿತ್ರದುರ್ಗ |
| ೦೪. | ಮಾಕಂ ಶ್ರೀನಿವಾಸಲು | ಶ್ರೀಬೆಳಗೆರೆ ಕೃಷ್ಣಶಾಸ್ತ್ರಿಯವರ ಅಭಿಮಾನಿ ಸಂಘದ ನಿದೇಶಕರು | ಚಳ್ಳಕೆರೆ |
| ೦೫. | ನಾ.ರವಿಕುಮಾರ | ಅಭಿನವ ಪ್ರಕಾಶನ, ಪ್ರಕಾಶಕರು | ಬೆಂಗಳೂರು |
| ೦೬. | ಕೆ.ಎನ್.ಭೀಮಾರೆಡ್ಡಿ | ನಿವೃತ್ತ ಶಿಕ್ಷಕರು | ರಾಂಪುರ |
| ೦೭. | ರಾಜಣ್ಣ | ಕೃಷಿಕರು | ಬೆಳಗೆರೆ |
| ೦೮. | ಬಡಗಿ ನರಸಿಂಹಪ್ಪ | ಕೃಷಿಕರು ಮತ್ತು ಬಡಗಿ | ಕೋನಿಗರಹಳ್ಳಿ |
| ೦೯. | ಓಬಳೇಶ. ಹೆಚ್ | ಕೃಷಿಕರು | ಯಲಗಟ್ಟೆ |
| ೧೦. | ಮಾರೇಶ ಡಿ | ಶಿಕ್ಷಕರು | ಸಿದ್ಧಯ್ಯನಕೋಟೆ |
| ೧೧. | ಅಶೋಕ (ಎಂ.ಎ, ಬಿಇಡಿ) | ವಿದ್ಯಾರ್ಥಿ | ರಂಗೇನಹಳ್ಳಿ |
| ೧೨. | ವೆಂಕಟೇಶ (ಬಿ.ಎ, ಬಿಇಡಿ) | ವಿದ್ಯಾರ್ಥಿ | ಚಳ್ಳಕೆರೆ |
| ೧೩. | ದಿನೇಶ್‌ಕುಮಾರ್ ವೈ.ಹೆಚ್ | ಬಿಜಿನೆಸ್ | ಚಿತ್ರದುರ್ಗ |



ಬೆಳಗೆರೆ ಕೃಷ್ಣಶಾಸ್ತ್ರಿಗಳ ಮನೆ



ಸಂಶೋಧಕ ಯೋಗೇಶ್‌ರೊಂದಿಗೆ ಬೆಳಗೆರೆ ಕೃಷ್ಣಶಾಸ್ತ್ರಿಗಳು



ಬೆಳಗೆರೆ ಕೃಷ್ಣಶಾಸ್ತ್ರಿಗಳು ಪಡೆದ ಪ್ರಶಸ್ತಿ ಫಲಕಗಳು



ಬೆಳಗೆರೆ ಕೃಷ್ಣಶಾಸ್ತ್ರಿಗಳು ಪಡೆದ ಪ್ರಶಸ್ತಿ ಫಲಕಗಳು



ಶ್ರೀಮತಿ ಅನ್ನಪೂರ್ಣಮ್ಮ [ಬೆಳಗೆರೆ ಕೃಷ್ಣಶಾಸ್ತ್ರಿಗಳ ತಾಯಿ]

ಶ್ರೀ ಬೆಳಗೆರೆ ಚಂದ್ರಶೇಖರ ಶಾಸ್ತ್ರಿ [ಬೆಳಗೆರೆ ಕೃಷ್ಣಶಾಸ್ತ್ರಿಗಳ ತಂದೆ]

ಶ್ರೀಮತಿ ಪದ್ಮಾವತಿ [ಬೆಳಗೆರೆ ಕೃಷ್ಣಶಾಸ್ತ್ರಿಗಳ ಹೆಂಡತಿ]



ಶ್ರೀಮತಿ ಬೆಳಗೆರೆ ಜಾನಕಮ್ಮ

[ಬೆಳಗೆರೆ ಕೃಷ್ಣಶಾಸ್ತ್ರಿಗಳ ಅಕ್ಕ ಹಾಗೂ ನವೋದಯ ಕಾಲಘಟ್ಟದ ಮೊದಲ ಮಹಿಳಾ ಲೇಖಕಿ]



ಬೆಳಗೆರೆಯಲ್ಲಿ ನಿರ್ಮಿಸಿದ 'ಶ್ರೀ ಶಾರದಾ ಮಂದಿರ ವಿದ್ಯಾ ಸಂಸ್ಥೆ'.




ಬೆಳಗೆರೆ ಕೃಷ್ಣಶಾಸ್ತ್ರಿಗಳು ನಿರ್ಮಿಸಿದ 'ಶ್ರೀ [illegible] ವಿದ್ಯಾರ್ಥಿನಿಲಯ'.



ಬೆಳಗೆರೆಯಲ್ಲಿ ಶಾರದಾ ಮಂದಿರದ ಶಂಕುಸ್ಥಾಪನೆ



ಹೆಗ್ಗೆರೆಯಲ್ಲಿ ಐದು ಕೊಠಡಿಗಳ ಕಟ್ಟಡ



[illegible]

